

ಶ್ರೀವಿಷ್ಣು ವಿಶ್ವಾದಿ ಮೂಲ ಮಾಯಾಲೋಲ
ದೇವ ಸರ್ವೇಶ ಪರಬೊಮ್ಮನೆಂದು ಜನಂ
ಆವುದನು ಕಾಣದೊಡಮಳ್ತಿಯಿಂ ನಂಬಿಹುದೊ
ಆ ವಿಚಿತ್ರಕೆ ನಮಿಸೊ ಮಂಕುತಿಮ್ಮ

ಜೇವ ಜಡರೂಪ ಪ್ರಪಂಚವನಾವುದೋ
ಆವರಿಸಿಕೊಂಡು ಮೊಳನೆರೆದು ಮಿಹುದಂತೆ
ಭಾವ ಕೊಳ ಪಡದಂತೆ ಅಳತೆಗಳ ವಡದಂತೆ
ಆ ವಿಶೇಷಕೆ ಮಣಿಯೊ ಮಂಕುತಿಮ್ಮ

--ಡಿ.ವಿ.ಜಿ.

ಸಂದರ್ಶಿಸಿ.

ಆನಂದಿಸಿ.

# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ
# ತಿರುಮಲೆ



## ವಾರ್ಷಿಕ ಪವಿತ್ರೋತ್ಸವ

**5--8--95 ರಿಂದ 8--8--95 ವರೆಗೆ**

| | | |
|---|---|---|
| 5--8--95 | ಶನಿವಾರ | ಅಂಕುರಾರ್ಪಣೆ. |
| 6--8--95 | ಭಾನುವಾರ | ಪವಿತ್ರಪ್ರತಿಷ್ಠೆ. |
| 7--8--95 | ಸೋಮವಾರ | ಪವಿತ್ರ ಸಮರ್ಪಣೆ. |
| 8--8--95 | ಮಂಗಳವಾರ | ಪೂರ್ಣಾಹುತಿ. |

ಶ್ರಾವಣಮಾಸದಲ್ಲಿ ನಡೆಯುವ ಈ ಉತ್ಸವದಲ್ಲಿ ಗೃಹಸ್ಥರು ಆರ್ಜಿತಸೇವಾ ಶುಲ್ಕವನ್ನು ನೀಡಿ ಸೇವಾದಾರರಾಗಬಹುದು. ವಿವರಗಳಿಗಾಗಿ ಬಳಿಯ ತಿ.ತಿ.ದೇ. ವಿಚಾರಣಾ ಕಚೇರಿಯಲ್ಲಿ ವಿಚಾರಿಸಿ.

ನೀವೂ ಬನ್ನಿ.

ತಿ. ತಿ. ದೇ.

ನಿಮ್ಮವರನ್ನೂ ಕರೆತನ್ನಿ.



ಗೌರವ ಸಂಪಾದಕರು :
ಶ್ರೀ ಎನ್. ರಮೇಶ್‌ಕುಮಾರ್, ಐ.ಎ.ಎಸ್.,
ಕಾರ್ಯನಿರ್ವಹಣಾಧಿಕಾರಿ,
ತಿ.ತಿ.ದೇ. ತಿರುಪತಿ.

ಸಂಪಾದಕ :
ಎನ್.ಎಸ್. ರಾಮಮೂರ್ತಿ, ಎಂ.ಎ.

ಉಪಸಂಪಾದಕ :
ಬಿ. ಎನ್. ಶ್ರೀನಿವಾಸನ್ ಎಂ.ಎ.,

ಮುದ್ರಣ :
ಪಿ. ಮೋಹನ್‌ರಾವ್

ಲೇಖನ/ಜಾಹೀರಾತುಗಳಿಗೆ
ಮಿಕ್ಕವಿವರಗಳಿಗೆ
ಸಂಪಾದಕರು,
ತಿರುಮಲ ತಿರುಪತಿ ದೇವಸ್ಥಾನಗಳು,
ತಿರುಪತಿ.

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ.ತಿ.ದೇ. ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೨--೦೦**

**ವಾರ್ಷಿಕ ಚಂದಾ ೨೪--೦೦**



**ಸಂಪುಟ -- 26 ಜುಲೈ 1995 ಸಂಚಿಕೆ --2**

# ವಿಷಯಸೂಚಿ



ಮುಖ ಚಿತ್ರ : ಆಂಡಾಳ್ ತಿರುವಾಡಿಪ್ಪೂರಂ.
ಹಿಂಬದಿಯಲ್ಲಿ : ಶ್ರೀನಿವಾಸಮಂಗಾಪುರದ ದೇವಾಲಯ.
ಒಳಗಡೆ : 1) ಪೆರಿಯಾಳ್ವಾರ್.
2) ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬ್ರಹ್ಮೋತ್ಸವದಲ್ಲಿ ಶೇಷವಾಹನೋತ್ಸವ.
ಮಧ್ಯವಿಸ್ತೃತಿ : ತಿರುಮಲೆಯ ಆಲಯದ ಆನಂದವಿಮಾನ.








ಮನುಷ್ಯ ಸಂಘಜೀವಿ. ಇತರರೊಡನೆ ಕೂಡಿಕೊಂಡೇ-ಬದುಕಬೇಕು. ಅದು ಅನಿವಾರ್ಯ. ಈ ಕೂಡಿ ಬಾಳುವ ಕಲೆಗೆ ಸ್ವಲ್ಪ ಶಿಕ್ಷಣವೂ ಬೇಕು. ಎಲ್ಲ ಹುಟ್ಟುತ್ತಲೇ ಬಾರದು ಎಂಬುದಂತೂ ಸಿದ್ಧವಾದ ಮಾತೇ. ಅಂದಮೇಲೆ ಕಲಿಯುವ ಕ್ರಿಯೆ ಹುಟ್ಟಿನಿಂದಲೇ ಮೊದಲಾಗಿ ಹಳ್ಳ ಸೇರುವವರೆಗೆ ಮುಂದುವರೆಯುತ್ತಲೇ ಇರುತ್ತದೆ ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ತಾಯಿ ಮೊದಲ ಪಾಠಶಾಲೆ ಎಂಬ ಮಾತು ಇದೆ. ಮಾನವ ಅನಾಲೋಚಿತವಾಗಿ, ತನ್ನ ತಕ್ಷಣದ ಅವಶ್ಯಕತೆಗಳನ್ನು ಪೂರೈಸಿಕೊಳ್ಳಲೆಂದೇ ಅನುಕರಣೆಯಿಂದ ಆರಂಭದಲ್ಲಿ ಕಲಿಯಬಹುದಾದರೂ, ಬದುಕಿನ ದಾರಿಯಲ್ಲಿ ಮುಂದುವರಿದಂತೆ ತನ್ನ ಗೊತ್ತು ಗುರಿಗಳನ್ನು ತಿಳಿದು ಗುರುವನ್ನು ಹುಡುಕಿ, ಕಲಿಯುವ ಉದ್ದೇಶ ಹೊಂದಿ ಮುಂದುವರೆಯುತ್ತಾನೆ ಎಂಬುದೂ ಸಹಜವೇ. ಗಣಿತ, ಭಾಷೆ, ಇತಿಹಾಸ, ಮೊದಲಾದ ಸಾಮಾಜಿಕ ಜೀವನದ ಅಗತ್ಯಗಳನ್ನು ಕಲಿಯುತ್ತಲೇ ನಾಗರಿಕತೆಯ ಸುಳಿಯಲ್ಲಿನ ಸ್ಪರ್ಧಾತ್ಮಕ ಪರೀಕ್ಷೆಗಳು, ಪದವಿ, ಉದರಂಭರಣೋದ್ಯೋಗ ಭಡತಿ - ಇತ್ಯಾದಿಗಳಲ್ಲಿ ಸಿಕ್ಕಿ ಜೀವನದ ನಿಜವಾದ ಗೊತ್ತು ಗುರಿಗಳನ್ನು ಮರೆಯುವುದು ಸುಲಭವೂ, ಸಹಜವೂ ಆಗುತ್ತದೆ. ಆಗ ಮನುಷ್ಯ ಆಲೋಚನೆ ಮಾಡಬಲ್ಲ ಪ್ರಾಣಿಯೇ ಆದರೂ, ಇತರ ಪ್ರಾಣಿಗಳಿಗಿಂತ ಬೇರೆಯಾಗದೆ ಅವುಗಳ ಸ್ತರದಲ್ಲೇ ಹೆಚ್ಚೆಂದರೆ ಅವುಗಳಿಗಿಂತ ತುಸುವೇ ಪಾಲಿಷ್ ಆದ ರೀತಿಯಲ್ಲಿ ಮೂಲಭೂತ ಅಗತ್ಯಗಳನ್ನು ತೀರಿಸಿಕೊಂಡು ತೀರಿಕೊಳ್ಳುವುದಷ್ಟೇ ಕೆಲಸವಾಗಿತ್ತದೆ. ಈಸುವುದಷ್ಟೇ ಉದ್ಯೋಗವಾಗುತ್ತದೆ, ಜೈಸುವುದಾಗದು. ಎತ್ತು ಗಾಣವ ತಿರುಗಿದಂತೆ.

ಬದುಕಿನ ದಾರಿ ಅಷ್ಟು ಮಾತ್ರವೇ ಅಲ್ಲ ಎಂಬುದನ್ನು ಗುರುತಿಸಿಕೊಳ್ಳಬೇಕು ಎಂದರೆ ಅದನ್ನು ತೋರಿಸುವ ಕೈಮರವಾದರೂ ಬೇಕು. ಈ ಮಾರ್ಗ ದರ್ಶನವಾಗಲು ಗುರುವಿನ ನೆರವು ಎಷ್ಟಾದರೂ ಅಗತ್ಯವೇ ಶಿಷ್ಯನ ಬದುಕಿನ ಪ್ರಾಥಮಿಕ ಅಗತ್ಯ ಪೂರೈಕೆಗೆ ತಕ್ಕ ವಿದ್ಯೆಯಷ್ಟನ್ನೇ ಅಲ್ಲದೆ, ಸಮಾಜಕ್ಕೆ ಶಿಷ್ಯನ ಸರ್ವತೋಮುಖ ವಿಕಾಸದಿಂದ ಪ್ರಯೋಜನವಾಗುವಂತೆ, ಶಿಷ್ಯನ ಒಳಗು ಹೊರಗುಗಳನ್ನು ಗುರು ಶಿಕ್ಷಿತಗೊಳಿಸಬೇಕು. ಶಿಷ್ಯ ಇಲ್ಲಿ ಸಲ್ಲುವಂತೆ ಶಿಕ್ಷಣ ಪಡೆದರೆ ಅಲ್ಲಿಯೂ ಸಲ್ಲಬಹುದು.

ಕಲಿಯುವ ಮನವಿದ್ದರೆ ಪ್ರಕೃತಿಯಲ್ಲಿರುವ ಎಲ್ಲದರಿಂದಲೂ ಕಲಿಯಬಹುದಂತೆ. ಮಗುವಿನಿಂದ ನಗುವುದನ್ನು, ಕಲ್ಲಿನಿಂದ ಕರಗದಿರುವಿಕೆಯನ್ನು, ಹೂವಿನಂತೆ ಅರಳುವುದನ್ನು ತುತ್ತೂರಿಯಿಲ್ಲದೆ ಬೆಳೆಯುವುದನ್ನು ಇತ್ಯಾದಿಯಾಗಿ. ಹಾಗಾವಾಗ ಸಾಹಿತ್ಯದಿಂದ ಹಿರಿಯರು ಬಿಟ್ಟು-ಬಳುವಳಿಯಾಗಿ ಕೊಟ್ಟು - ನಮ್ಮ ನಡುವೆ ಇರುವ ಸಾಹಿತ್ಯದಿಂದ ಕಲಿಯುವುದು ಅಪಾರವಿದೆ. ಅವರಲ್ಲಿಯೂ ರಾಮಾಯಣ, ಭಾರತ, ಗೀತೆ, ಗದ್ಯ ತ್ರಯಗಳಿಂದ ಕಲಿಯುವ ಮನವಿದ್ದರೆ ಅಪಾರವಾಗಿ ಕಲಿಯಬಹುದು.

ಇಂತಲ್ಲಿ ಸಾತ್ಯವತೇಯ ಇದ್ದಾರೆ. ಆತ ಮುಂದಿನ ತಲೆಮಾರುಗಳಿಗೆ ಬಿಟ್ಟದ್ದು ಕೇವಲ ಹಲವು ಪುಸ್ತಕಗಳನ್ನಲ್ಲ. ಕೇವಲ ಹಲವು ಒಳ್ಳೆಯ ಮಾತುಗಳನ್ನು ಮಾತ್ರವೇ ಅಲ್ಲ. ಜ್ಞಾನ ಸಾಗರವನ್ನೇ ಬಿಟ್ಟು ಹೋಗಿದ್ದಾರೆ. ಮನುಷ್ಯನ ಬದುಕಿನ ಗೊತ್ತು ಗುರಿಗಳನ್ನು ಕಂಡುಕೊಳ್ಳಲು ವ್ಯಾಸ ಸಾಹಿತ್ಯಕ್ಕಿಂತ ಬೇರೆಯಾದ ಸಾಹಿತ್ಯ ಬೇಕಿಲ್ಲವೆನ್ನುವಷ್ಟು ಸಮೃದ್ಧ. ಅವರು ಸಂಗ್ರಹಿಸಿದ್ದು, ವಿವರಿಸಿದ್ದು, ಸೂತ್ರ ಬದ್ಧಗೊಳಿಸಿದ್ದು, ಒಬ್ಬ ಮನುಷ್ಯ ಜೀವನದಲ್ಲಿ ಇಷ್ಟು ಪಾಠವನ್ನು ಬೋಧಿಸಲು ಶಕ್ಯವೇ ಎಂಬ ಆಶ್ಚರ್ಯ ದಿಗ್ಭ್ರಮೆ ಹುಟ್ಟಿಸುವಷ್ಟು ಸಾಹಿತ್ಯ. (ವ್ಯಾಸರು ಏಕವ್ಯಕ್ತಿಯಲ್ಲ ಎಂಬ ವಾದವಿದ್ದರೂ ಈ ಮಾತಿಗೆ ಲೋಪ ಬರದು ಎನ್ನುವಷ್ಟು ಪ್ರಮಾಣದ ಸಾಹಿತ್ಯ) ಎಂತಲೇ ಅವರ ಪೂಜೆಯನ್ನು ವ್ಯಾಸಪೂಜೆ ಎಂದು ಆಚರಿಸುತ್ತಾರೆ. (ಅಥವಾ ಎಲ್ಲ ಗುರುಗಳನ್ನೂ ಒಟ್ಟು ಸೇರಿಸಿದ ಮೂರ್ತಿಯೇ ವ್ಯಾಸರಾಗಿ ಅವರನ್ನು ಒಟ್ಟಿಗೆ ಆರಾಧಿಸುವ ಪರಂಪರೆಯೂ ಆಗಿರಲಿಕ್ಕೆ ಸಾಕು.)

ಗುರುವಂದನೆಯ ಮೂಲಕವೇ ಸನಾತನಧರ್ಮದಲ್ಲಿ ಶಿಕ್ಷಣಾರಂಭವಾಗುವ ಪರಂಪರೆಯಿದೆ. ಗುರುವನ್ನು ಬ್ರಹ್ಮ ವಿಷ್ಣು, ಮಹೇಶ್ವರರಿಗೆ ಸಮೀಕರಿಸಿ, ಅವರನ್ನು ಎತ್ತರದಲ್ಲಿ ಕೂರಿಸಿ, ಅವರಿಂದ ಕಲಿಯುವ ಪದ್ಧತಿ; ಅಲೆಯುವ ಮನವೇ ಸ್ಥಾಯಿಯಾಗಿರುವ ಬದುಕಿನಲ್ಲೂ ಕಲಿಯುವ ಮನವೂ ಇರಬೇಕು ಎಂಬುದರ ಸಂಕೇತವಾಗಿ ನಿಲ್ಲುತ್ತದೆ. ಅದರ ನೆನಪಿನಲ್ಲಿಯೇ ವ್ಯಾಸ ಪೂರ್ಣಿಮೆ ಪ್ರಾಮುಖ್ಯವನ್ನು ಪಡೆಯುತ್ತದೆ.

ಇಂತಹ ವ್ಯಾಸ ಪೂರ್ಣಿಮೆಯ ದಿನದಂದು ಅವರನ್ನು ನೆನೆದು ಅವರ ಸಾಹಿತ್ಯವನ್ನರಿಯುವ ಮಾನಸಿಕ ಪ್ರಯತ್ನ ಮಾಡುವುದರಿಂದ ಅವರಿಗೆ ನಮನಗಳನ್ನು ಸಲ್ಲಿಸುವುದು ಸಮುಚಿತವಾದೀತು.

ನಮೋಸ್ತುತೇ ವ್ಯಾಸ ವಿಶಾಲ ಬುದ್ಧೇ ಫುಲ್ಲಾರವಿಂದಾಯತ ಪತ್ರನೇತ್ರ
ಯೇನ ತ್ವಯಾ ಭಾರತ ತೈಲಪೂರ್ಣಃ ಪ್ರಜ್ವಾಲಿತೋ ಜ್ಞಾನ ಮಯಃ ಪ್ರದೀಪಃ

-- ಇತಿ ಶಂ --

# ಮಹರ್ಷಿ ವೇದವ್ಯಾಸರು

---ಸಂತಹರಿಹರಾನಂದಸರಸ್ವತೀ.

ಮ್ಮ ಗುರುಪರಂಪರೆಯಲ್ಲಿ, ಪರಾಶರಪು ನ "ಶ್ರೀಕೃಷ್ಣದ್ವೈಪಾಯನ ವ್ಯಾಸ"ರನ್ನೂ ಲು ಸ್ತುತಿಸಿ ನಂತರ ಮಿಕ್ಕ ಆಚಾರ್ಯರನ್ನು ಕೊಂಡು ಸ್ತುತಿಮಾಡುತ್ತೇವೆ. ಅನಂತವೂ, ರುಷೇಯವೂ ಆದ ವೇದಗಳನ್ನು ವಿಂಗಡಿಸಿ ದ ಪರಾಶರಪುತ್ರರಿಗೆ - "ವೇದವ್ಯಾಸ"ರೆಂದು ು ಅನ್ವರ್ಥವಾಗಿ ಸುಪ್ರಸಿದ್ಧವಾಗಿದೆ.

ವ್ಯಾಸ ವೇದಾನ್ ಯಸ್ಮಾತ್
: ವೇದವ್ಯಾಸ ಇತೀರಿತಃ

ಶ್ವಸಾಹಿತ್ಯದಲ್ಲಿ (ವೇದ) ವೈದಿಕಸಾಹಿತ್ಯವು ಲನೆಯದು. ದೈವ, ಧರ್ಮ ಮತ್ತು ಜೀವ ಸಾಂಸ್ಕೃತಿಕ ಮೌಲ್ಯಗಳನ್ನು ಪ್ರತಿಬಿಂಬಿಸುವ ಕ್ಯವೇ "ವೇದ". "ವೇದೋಽಖಿಲೋಧರ್ಮ ಂ" ವೇದವು ಧರ್ಮದ ಮೂಲ.

ಮ ಸ್ವಯಂ ಪ್ರಕಾಶನೂ, ಸರ್ವವ್ಯಾಪ್ತನೂ ಪರಮಾತ್ಮನಿಂದ ಬಂದುದು. ತರುವಾಯ ಮುಖದಿಂದ ಅವು ಬಂದುವು. ಆದು ನ ಇವುಗಳು (ವೇದವನ್ನು ) ಅಪೌರು ವೆಂದು ಕರೆಯಲ್ಪಡುತ್ತದೆ. ವೇದ ಸಾಹಿ ಎಲ್ಲರಿಗೂ ಅರ್ಥವಾಗುವುದು ಕಷ್ಟಕರವಾ ಋಷಿಸತ್ತಮರಾದ ದ್ವೈಪಾಯನ ವ್ಯಾಸರು ತ ವೇದಗಳ ರಾಶಿಯನ್ನು ನಾಲ್ಕು ಭಾಗವಾಗಿ ಡಿಸಿ, ಸಾಮಾನ್ಯರಿಗೂ ದಕ್ಕುವಂತೆ ಮಾಡಿದ ಗೆ ಭಾಜನರಾಗಿದ್ದಾರೆ.

ರುವಾಯ ವ್ಯಾಸರು - ಮೊದಲು ತಮ್ಮ ರು (ಮುಖ್ಯರಿಗೆ) ಮುಖ್ಯ ಶಿಷ್ಯರಿಗೆ ಈ ವೇದ ಉಪದೇಶಿಸಿದರು. ಅವರುಗಳು ವೇದಗ ಕಲಿತು ಪರಿಣತರಾಗಿ ತಮ್ಮ ಶಿಷ್ಯರಿಗೆ ಕಲಿ ಬಂದರು. ಪರಿಣಾಮವಾಗಿ ಯಾವ ಯಾವ ದವರು ವೇದವನ್ನು ಕಲಿತರೋ ಆಯಾ ನವರು ಋಗ್ವೇದಿಗಳು, ಯಜುರ್ವೇದಿಗಳು, ವೇದಿಗಳು ಎಂದರು ಪರಂಪರೆಯಾಗಿ ಕರೆಸಿ ತ್ತಾ ಬಂದರು.

ರ್ಮಶಾಸ್ತ್ರಜ್ಞನಾದ ಮನುವು 'ವೇದ'ವು ದ ಮೂಲವೆಂದು ಹೇಳಿದ ನಲ್ಲವೇ? ಮುಂದುವರೆದು -- ಧರ್ಮಕ್ಕೆ ನಾಲ್ಕು ಲಕ್ಷಣಗಳು ಎಂದಿದ್ದಾನೆ.

ವೇದಃ ಸ್ಮತಿಃ ಸದಾಚಾರಃ
ಸ್ವಸ್ಯ ಚ ಪ್ರಿಯ ಮಾತ್ಮನಃ
ಏತತ್ ಚತುರ್ವಿಧಂ ಪ್ರಾಹುಃ
ಸಾಕ್ಷಾತ್ ಧರ್ಮಸ್ಯ ಲಕ್ಷಣಮ್

ವೇದಗಳು, ಸ್ಮತಿಗಳು, ಸದಾಚಾರ, ಮತ್ತು ತನಗೆ ಮತ್ತು ಆತ್ಮನಿಗೆ ಸಂಬಂಧಿಸಿದ ಕೆಲಸಗಳು ಎಂದರೆ-- ಧರ್ಮವನ್ನು ತಿಳಿಸುವ ನಾಲ್ಕು ಲಕ್ಷಣಗಳಲ್ಲಿ 'ವೇದ'ಕ್ಕೆ ಪ್ರಥಮಸ್ಥಾನ ದೊರಕಿದೆ. ವೇದಗಳಲ್ಲಿ ಅಡಗಿರುವ ಅಪಾರ ಜ್ಞಾನ, ಅದರ ವ್ಯಾಪ್ತಿ, ಗಾಂಭೀರ್ಯ, ಅನಾದಿ ಕಾಲದಿಂದಲೂ ಪಂಡಿತವರ್ಗವನ್ನು ವಿಸ್ಮಯಗೊಳಿಸುತ್ತಾ ಬಂದಿದೆ.

ವೇದಗಳಲ್ಲಿ ಮೊದಲನೆಯದು ಋಗ್ವೇದ. ವೇದಗಳಲ್ಲಿ ಯಜ್ಞ - ಯಾಗಾದಿಗಳು, ಆತ್ಮ- ಪರಮಾತ್ಮಗಳ ವಿಷಯಗಳನ್ನು ಮಾತ್ರವೆ ಪ್ರತಿಪಾದಿಸಲ್ಪಟ್ಟಿದೆ ಎಂಬ ಭಾವನೆ ಜನಗಳಲ್ಲಿದೆ. ಅಲ್ಲದೆ, ವೇದಗಳು ಅರ್ಥವಾಗದ ಧರ್ಮವನ್ನು ಬೋಧಿಸುತ್ತವೆ, ಅವು ಪಂಡಿತರಿಗೆ ಮಾತ್ರ, ಪಾಮರರಿಗೆ ಅಲ್ಲ ಎಂಬ ತಪ್ಪು ತಿಳಿವಳಿಕೆಯೂ ಇದೆ.

ಅಚತುರ್ವದನೋ ಬ್ರಹ್ಮಾ
ದ್ವಿಬಾಹುರಪರೋ ಹರಿಃ
ಅಫಾಲಲೋಚನಶ್ಶಂಭುಃ
ಭಗವಾನ್ ಬಾದರಾಯಣಃ

ವ್ಯಾಸಂ ವಸಿಷ್ಠನಪ್ತಾರಂ
ಶಕ್ತೇಃ ಪೌತ್ರಮಕಲ್ಮಷಂ
ಪರಾಶರಾತ್ಮಜಂ ವಂದೇ
ಶುಕತಾತಂ ತಪೋನಿಧಿಂ

ವೃಷ್ಣೀನಾಂ ವಾಸುದೇವೋಸ್ಮಿ
ಪಾಂಡವಾನಾಂ ಧನಂಜಯಃ
ಮುನೀನಾಮಪ್ಯಹಂ ವ್ಯಾಸಃ
ಕವೀನಾಮುಶನಾ ಕವಿಃ

ಪಂಡಿತರಿಗೂ, ಪಾಮರರಿಗೂ ಸುಲಭವಾಗಿ ಅರ್ಥವಾಗುವ ಸುಖೀಸಮಾಜ ನಿರ್ಮಾಣದ ವಿಷಯವೇ ವೇದಗಳಲ್ಲಿ ಹೇಳಿರುವುದು. ಈ ಪ್ರಾಪಂಚಿಕ ಜೀವನದಲ್ಲಿ ನಾವೆಲ್ಲ ಒಂದು ಎಂಬ ಭಾವನೆಯನ್ನು ಬೆಳೆಸಿಕೊಂಡು, ರಾಷ್ಟ್ರದ ಏಕತೆ ಮತ್ತು ಸಮಗ್ರತೆಗೆ ಪೂರಕವಾಗಿ ಶ್ರಮಪಟ್ಟು ಶ್ರದ್ಧೆಯಿಂದ ದುಡಿಯಬೇಕು. ಮಾನವ ಜೀವಿಗಳೆಲ್ಲರೂ 'ಮೈತ್ರಿ' ಯಿಂದ ಬಾಳಬೇಕು. ದುಷ್ಟ ವ್ಯಸನಗಳನ್ನು ಬಿಡಬೇಕು. "ಈಶ್ವರನು ಏಕನು" ಅವನು ಸರ್ವವ್ಯಾಪಿ. ಎಲ್ಲ ಜೀವಿಗಳಲ್ಲಿಯೂ ಪ್ರಾಣಿಗಳಲಿಯೂ ಸಹ ಅವನು ಇದ್ದಾನೆ. ಎಂದು ಅರಿತೂ - ಸಮಭಾವದಿಂದ ಬದುಕನ್ನು ನಡೆಸುತ್ತ, ಪರಮಾತತ್ಮನೆಡೆಗ ಸಾಗಬೇಕು.

'ವೇದ'ವನ್ನು "ಶ್ರುತಿ" ಎಂದೂ ಕರೆಯುವುದುಂಟು. "ವಿತ್" - ಎಂಬ ಧಾತುವಿನಿಂದ ವೇದ ಶಬ್ದವು ವ್ಯುತ್ಪತ್ತಿಯಾದರೆ 'ಶ್ರು' ಎಂಬ ಧಾತುವಿನಿಂದ 'ಶ್ರುತಿ' ಶಬ್ದದ ವ್ಯುತ್ಪತ್ತಿಯಾಗಿದೆ. ವೇದಗಳು ಕಿವಿಯಿಂದ ಕಿವಿಗೆ ಬಂದು ಪ್ರಚಲಿತವಾದ ಕಾರಣದಿಂಧ ವೇದವನ್ನು 'ಶ್ರುತಿ' ಎಂದೂ ಕರೆಯಲಾಗಿದೆ.

ಇಂತಹ ಜ್ಞಾನದ ರಾಶಿಯನ್ನು ಮಾನವಕುಲಕ್ಕೆ ಪರಿಚಯಿಸಿ ಮಹೋಪಕಾರ ಮಾಡಿದ ಮಹಾಋಷಿ ವೇದ ವ್ಯಾಸರು ಪ್ರಾತಃಸ್ಮರಣೆಯರಾಗಿದ್ದಾರೆ. ವೇದ ಸಾಹಿತ್ಯವನ್ನೇ ಅಲ್ಲದೇ "ಮಹಾಭಾರತ, ಭಾಗವತ, ಅಷ್ಟಾದಶಪುರಾಣಗಳು. ಭಗವದ್ ಗೀತಾ" -- ಮೊದಲಾದ ಮೌಲ್ಯಯುತ ಸದ್ಗ್ರಂಥಗಳನ್ನು ನೀಡಿದ, ಮಾನವನ ಬದುಕಿಗೆ ಭವಿಷ್ಯದ ಬೆಳಕಾಗಿರುವ ಜ್ಞಾನನಿಧಿ - ಮಾನನಿಧಿ ವೇದವ್ಯಾಸರನ್ನು ಮತ್ತು ಅವರ ಉಪಕಾರವನ್ನು ಸದಾಸ್ಮರಿಸುವುದು ನಮ್ಮ ಆದ್ಯಕರ್ತವ್ಯ. ♣

ಮಹರ್ಷಿ ವೇದವ್ಯಾಸರು ಭಾರತದ - ಅಷ್ಟೇಕೆ - ಜಗತ್ತಿನ ಅತ್ಯುತ್ತಮ ಶ್ರೇಣಿಯ ಸಾಹಿತಿಗಳಲ್ಲಿ ಅಗ್ರಮಾನ್ಯರು. ಇತಿಹಾಸಕಾರರಾಗಿ, ತಾತ್ವಿಕರಾಗಿ, ಸುಧಾರಕರಾಗಿ, ಸಂಪಾದಕರಾಗಿ, ಸಂಗ್ರಹಕಾರರಾಗಿ, ಸೂತ್ರಕಾರರಾಗಿ ಅವರು ನೀಡಿದ ಕೊಡುಗೆ ಅಪಾರ. ಅಂತಹವರನ್ನು ಗುರುವೆಂದು ಗುರುತಿಸಿ ಗುರುಪೂರ್ಣಿಮೆಯಂದು ನೆನೆಸಿ ನಮಿಸುವವರು ಪರಿವ್ರಾಜಕಾಚಾರ್ಯ ಸಂತ ಹರಿಹರಾನಂದ ಸರಸ್ವತೀ ಸ್ವಾಮಿಗಳು. ಸ್ವಾಮಿಜೀಯವರು ಸಮಾಜದ ಹಿತಕ್ಕಾಗಿ ತತ್ವಬೋಧೆ ಮಾಡುತ್ತ ಪರಿವ್ರಾಜಕರಾಗಿದ್ದಾರೆ. ಅವರಿಗೆ ಭಗವದ್ಗೀತೆ, ಭಾರತ, ಮಂಕುತಿಮ್ಮನ ಕಗ್ಗ ಬಹಳ ಅಚ್ಚು ಮೆಚ್ಚು.

# ತಿರುಮಲೆ -- ತಿರುಪತಿ ದೇವಸ್ಥಾನಗಳು -- ತಿರುಪತಿ.

# ಶ್ರೀ ಬಾಲಾಜಿ ಆರೋಗ್ಯ ವರಪ್ರಸಾದಿನಿ ಯೋಜನೆ

ಶ್ರೀ ವೆಂಕಟೇಶ್ವರಸ್ವಾಮಿಯ ಸನ್ನಿಧಿಯಿರುವ ತಿರುಮಲೆ ಪ್ರಾಚೀನ ಕಾಲದಿಂಲೂ ಯಾತ್ರಿಕರ ಆಕರ್ಷಣಾಕೇಂದ್ರವಾಗಿದೆ. ಪ್ರತಿದಿನವೂ ಸಾವಿರಾರು ಮಂದಿ ಭಕ್ತ ಯಾತ್ರಿಕರು ತಮ್ಮ ಐಹಿಕ ಆಧ್ಯಾತ್ಮಿಕ ಅಭಿವೃದ್ಧಿಗಾಗಿ ಇಲ್ಲಿ ಪ್ರಾರ್ಥನೆಯನ್ನು ಸಲ್ಲಿಸುತ್ತಾರೆ.

ತಿ. ತಿ. ದೇವಸ್ಥಾನಗಳು ಮಾನವಸೇವೆಯಲ್ಲಿ ಶ್ರದ್ಧಾಪೂರ್ವಕವಾಗಿ ಭಾಗವಹಿಸುವ ಪರಂಪರೆಯನ್ನು ಹೊಂದಿದೆ. ಕುಷ್ಠರೋಗ ನಿವಾರಣಾಕೇಂದ್ರ, ಅಂಗವಿಕಲರ ಅಭಿವೃದ್ಧಿ ಕೇಂದ್ರ, ಅನಾಥ ಶರಣಾಲಯ, ಕೇಂದ್ರ ಆಸ್ಪತ್ರೆ ಮೊದಲಾದವನ್ನು ತಿ.ತಿ.ದೇ. ಯಶಸ್ವಿಯಾಗಿ ನಿರ್ವಹಿಸುತ್ತಿದೆ. ಜನಕ್ಕೆ ವಿಶೇಷ ಆಧುನಿಕ ವೈದ್ಯಕೀಯ ಸೇವೆ ಸಲ್ಲಿಸಲು ಸ್ವಾಮಿಯ ಆಶೀರ್ವಾದದ ಬೆಂಬಲದಿಂದ ಶ್ರೀ ವೆಂಕಟೇಶ್ವರ ವೈದ್ಯಕೀಯ ಸಂಸ್ಥೆ (ಸ್ವಿಮ್ಸ್)ಯನ್ನು -- ದೆಹಲಿ, ಅಜ್ಮೀರ, ಪಾಂಡಿಚೇರಿ, ಚಂಡೀಘರ್‌ಗಳ ಆಲಿಂಡಿಯಾ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್, ಮಾದರಿಯಲ್ಲಿ ಆರಂಭಿಸಲಾಗಿದೆ. ಶ್ರೀ ವೆಂಕಟೇಶ್ವರ ವೈದ್ಯವಿಜ್ಞಾನ ಸಂಸ್ಥೆಯ ಮೂಲ ಉದ್ದೇಶ -- ಮನುಷ್ಯನ ಸರ್ವಾಂಗೀಣ ಆರೋಗ್ಯಸಾಧನೆ -- ಇಲ್ಲಿ ವೈದ್ಯಸೇವೆ, ವೈದ್ಯವಿಜ್ಞಾನದ ಶಿಕ್ಷಣ -- ತರಬೇತಿಗಳೊಡನೆ ಸಂಶೋಧನೆ ಅಭಿವೃದ್ಧಿಯನ್ನೂ ನಡೆಸಲಾಗುವುದು.

ಇಂತಹ ವೈದ್ಯವಿಜ್ಞಾನದ ಬಾಗಿಲು ನಮ್ಮಲ್ಲಿನ ಎಲ್ಲರಿಗೂ ತೆರೆದಿರಬೇಕು. ಅದನ್ನು ಸಾಧಿಸಲೆಂದೇ ಶ್ರೀ ಬಾಲಾಜಿ ಆರೋಗ್ಯವರ ಪ್ರಸಾದಿನಿ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದೆ. ವಿಶೇಷ ತಜ್ಞ ವೈದ್ಯಕೀಯ ಸೇವೆಯು ಎಲ್ಲರಿಗೂ ಸುಲಭವಾಗಿ ದೊರೆಯುವಂತೆ ಮಾಡಲು ದಾನಿಗಳಿಂದಲೂ ಸಾರ್ವಜನಿಕರಿಂದಲೂ ಉದಾರವಾದ ದೇಣಿಗೆಗಳನ್ನು ನಿರೀಕ್ಷಿಸಲಾಗಿದೆ.

ಯೋಜನೆಯ ಸಾರಾಂಶ ಹೀಗಿದೆ :---

* ದಾನಿಗಳು ರೂ 1000-- ಅಥವಾ ಗುಣಕಗಳಲ್ಲಿ ದಾನ ನೀಡಬಹುದು. ಅದಕ್ಕೆ ಸಮನಾದ ಧನವನ್ನು ತಿ.ತಿ.ದೇ. ಸೇರಿಸಿ ಮೊತ್ತದ ಹಣವನ್ನು ರಾಷ್ಟ್ರೀಕೃತ ಬ್ಯಾಂಕಿನಲ್ಲಿ ಠೇವಣಿಯಿರಿಸಿ ಅದರ ಬಡ್ಡಿಯನ್ನು ಬಡವರ, ವೈದ್ಯಕೀಯ ಚಿಕಿತ್ಸೆಗಾಗಿ ಬಳಸಲಾಗುವುದು.
* ಹತ್ತು ಲಕ್ಷ ಹಾಗೂ ಹೆಚ್ಚಿನ ಧನವನ್ನು ನೀಡುವವರ ಹೆಸರಿನಲ್ಲಿ ಒಂದು ಸಂಶೋಧನ ಪೀಠವನ್ನು ಸ್ಥಾಪಿಸಲಾಗುವುದು.
* ದಾನವನ್ನು ವ್ಯಕ್ತಿ / ಕುಟುಂಬ / ಕಂಪನಿ / ಯಾರಾದರೂ ಮಾಡಬಹುದು.
* ಐದು ಲಕ್ಷ ರೂಗಳಿಗಿಂತ ಹೆಚ್ಚಿಗೆ ದಾನ ನೀಡುವವರ ಹೆಸರನ್ನು ಸಂಸ್ಥೆಯ ಸ್ವಾಗತಕಚೇರಿಯಲ್ಲಿ ಬರೆದು ಪ್ರದರ್ಶಿಸಲಾಗುವುದು.
* ಪ್ರಯೋಜನ ಪಡೆದು ಆರೋಗ್ಯಹೊಂದಿದವರ ಡಿಸ್ಚಾರ್ಜ್ ಚೀಟಿಯಲ್ಲಿ ದಾನಿಗಳ ಹೆಸರನ್ನು ನಮೂದು ಮಾಡಲಾಗುವುದು.

## ದಾನಿಗಳಿಗೆ ನೀಡಲಾಗುವ ಸೌಕರ್ಯಗಳು :

* ಶ್ರೀ ಬಾಲಾಜೀ ಆರೋಗ್ಯ ವರಪ್ರಸಾದಿನಿ ಯೋಜನೆಗೆ ನೀಡಲಾದ ದಾನ 80 ಜಿ. ಕಲಮಿನನ್ವಯ ಆದಾಯಕರ ಮುಕ್ತ.
* ಆಸ್ಪತ್ರೆಯಲ್ಲಿ ದಾನಿಗಳ ಕುಟುಂಬಕ್ಕೆ ಬಾಡಿಗೆ ಕೋಣೆ ಹವಾನಿಯಂತ್ರಿತ ಕೋಣೆಗಳನ್ನು ನೀಡಲಾಗುವುದು
* 5 ಲಕ್ಷ ಮತ್ತು ಹೆಚ್ಚಿನ ಹಣದ ದಾನಿಗಳ ಹೆಸರಿನಲ್ಲಿ ಬಾಡಿಗೆ ಕೋಣೆಗಳನ್ನೂ ನಿರ್ಮಿಸಲಾಗುವುದು.
* 5 ಲಕ್ಷ ಹಾಗೂ ಹೆಚ್ಚಿನ ಹಣದ ದಾನದಿಂದ ದಾನಿಗಳು ಪ್ರತಿವರ್ಷ ಒಂದು ಚಿಕಿತ್ಸೆಯನ್ನು ಪ್ರಾಯೋಜಿತಗೊಳಿಸಬಹುದು.
* ದಾನಿಗಳು ಒಳರೋಗಿಗಳ, ಹೊರರೋಗಿಗಳ, ಆಹಾರಕ್ಕಾಗಿಯೂ ನೀಡಬಹುದು. ಸಂಸ್ಥೆಯಲ್ಲಿನ ವಾರ್ಷಿಕ ಸಾರಿಗೆ ವೆಚ್ಚಗಳಿಗೂ ನೀಡಬಹುದು.

  ಕಾರ್ಯನಿರ್ವಹಣಾಧಿಕಾರಿ ತಿ.ತಿ.ದೇ. ತಿರುಪತಿ -- ಇವರ ಹೆಸರಿನಲ್ಲಿ ಪಡೆದ ಡಿ. ಡಿ. ಯನ್ನು -- ನಿರ್ದೇಶಕರು ಶ್ರೀ ವೆಂಕಟೇಶ್ವರ ಇನ್‌ಸ್ಟಿಟ್ಯೂಟ್ ಆಫ್ ಮೆಡಿಕಲ್ ಸೈನ್ಸಸ್ -- ಇವರಿಗೆ ಕಳುಹಿಸುತ್ತ ಜೊತೆಗೇ ಕೆಳಕಂಡ ವಿವರಗಳನ್ನೂ ಎಲ್ಲ ದಾನಿಗಳೂ ನೀಡಬೇಕು.

* ಒಂದು ಲಕ್ಷ ಅಥವಾ ಅದಕ್ಕಿಂತ ಹೆಚ್ಚಿನ ಹಣ ದಾನಮಾಡುವವರ ಹೆಸರು ವಿಳಾಸಗಳೊಡನೆ ಅವರ ಮನೆಯ ಎಲ್ಲ ಸದಸ್ಯರ ಪಾಸ್‌ಪೋರ್ಟ್ ಸೈಜಿನ ಈಚಿನ ಭಾವಚಿತ್ರ ವಿರಬೇಕು.
* ಆದಾಯತೆರಿಗೆ ವಿನಾಯತಿಯ ಪ್ರಮಾಣ ಪತ್ರವನ್ನು ಯಾರ ಹೆಸರಿಗೆ ನೀಡಬೇಕು ಎಂಬುದು.
* ದಾನಿಗಳು ಇತರತ್ರ ಯಂತ್ರ ಉಪಕರಣಗಳನ್ನು ನೀಡಲೂ ಅವಕಾಶವಿದೆ, ಅಥವಾ ವಾಹನಗಳನ್ನೂ ನೀಡಬಹುದಾಗಿದೆ. ಗ್ರಾಮೀಣ ಪ್ರಾಂತ್ಯಗಳಲ್ಲಿ ತಿ. ತಿ. ದೇವಸ್ಥಾನಗಳ ಆರೋಗ್ಯವಿಸ್ತರಣಾ ಶಿಬಿರಗಳನ್ನೂ ಪ್ರಾಯೋಜಿತಗೊಳಿಸಬಹುದು.

ಮಿಕ್ಕ ವಿಷಯಗಳನ್ನು ತಿಳಿಯಲು ಬರೆಯಬೇಕಾದ ವಿಳಾಸ--

**ಕಾರ್ಯನಿರ್ವಹಣಾಧಿಕಾರಿ,**

ತಿರುಮಲೆ, ತಿರುಪತಿ, ದೇವಸ್ಥಾನಗಳು -- ತಿರುಪತಿ.

ಅಥವಾ

**ನಿರ್ದೇಶಕರು,**

ಶ್ರೀ ವೆಂಕಟೇಶ್ವರ ಇನ್ಸಿಟಿಟ್ಯೂಟ್ ಆಫ್

ಮೆಡಿಕಲ್ ಸೈನ್ಸಸ್, ತಿರುಪತಿ.

ಹರ್ಷಿ ವಾಲ್ಮೀಕಿಯು ಆದಿಕವಿಯಾದರೆ ಭರ
ಭಾರತದಲ್ಲಿ ನಾಟ್ಯಶಾಸ್ತ್ರ ಪಿತಾಮಹ. ಕ್ರಿ.ಶ.
ೀ ಶತಮಾನ ಅಂದರೆ ಮಹಾಕವಿ ಕಾಳಿದಾ
ಲಕ್ಕಾಗಲೇ ಭರತನನ್ನು ಮುನಿಯೆಂದು ಪರಿ
ಲಾಗಿತ್ತು. ಆಶ್ವಘೋಷ ಮತ್ತು ಭಾಸರು
ೀ ಭರತನ ನಾಟ್ಯಶಾಸ್ತ್ರದ ಸೂತ್ರಗಳಂತೆ
ಕಗಳನ್ನು ರಚಿಸಿದ್ದರು. ಪಾಣಿನಿಯು ನಟರ
ಮತ್ತು ನಾಟ್ಯಶಾಸ್ತ್ರದ ಸೂತ್ರಗಳ ಬಗ್ಗೆ ಉಲ್ಲೇ
ತ್ತಾನೆ. ಪತಂಜಲಿಯು ಅರ್ಥೈಸಿದ ರಸತತ್ವದ
ಪಾಣಿನಿಯು ನೆನೆಯುತ್ತಾನೆ. ಭರತನ ಕಾಲ
ಕ್ರಿಸ್ತ ಪೂರ್ವ ಐದನೆಯ ಶತಮಾನವೆಂದು
ಲಾಗುತ್ತಿದೆ. ಕ್ರಿಸ್ತಶಕೆಯ ಆರಂಭದ ಕಾಲಕ್ಕೆ
ಸಂಗೀತ ಮತ್ತು ನಾಟಕ ಕಲೆಗಳ ತೀವ್ರ ಅಭಿ
ಯನ್ನು ಕಾಣುತ್ತೇವೆ.

ರತನು ನಾಟ್ಯಶಾಸ್ತ್ರವನ್ನು ರಚಿಸುವುದರ
ಕಿಗೆ ತ್ರಿಪುರ ದಹನ, ಅಮೃತ ಮಂಥನ
ತಾದ ನಾಟಕಗಳನ್ನು ರಚಿಸಿ ರಂಗ ಪ್ರಯೋ
ನ್ನು ನಡೆಸಿದನೆಂದು ಹೇಳಲಾಗುತ್ತಿದೆ.

ಮ್ಮ ಪರಂಪರೆಯಲ್ಲಿ ಅನೇಕ ಭರತರಿದ್ದಾರೆ.
ನ ತಮ್ಮ ಭರತ, ದುಷ್ಯಂತ -- ಶಕುಂತ
ರ ಪುತ್ರ ಭರತ, ಬಾಹುಬಲಿಯ ಸೋದರ
. ಆದರೆ ನಾಟ್ಯಶಾಸ್ತ್ರದ ಭರತನೇ ಬೇರೆ.
ಭರತನು ಪ್ರಾಯಶಃ ಋಗ್ವೇದ ಪರಂಪ
ಭರತನಿರಬೇಕು. ನಾಟ್ಯಶಾಸ್ತ್ರದಲ್ಲಿ ನಟನಿಗೆ
ನಿರ್ದೇಶಕನಿಗೆ ಭರತನೆಂದು ಕರೆಯಲಾ
ಭರತನು ಸ್ವರ್ಗಲೋಕದಿಂದ ಈ ಶಾಸ್ತ್ರವನ್ನು
ಲೋಕಕ್ಕೆ ತಂದು ತನ್ನ ನೂರು ಜನ ಮಕ್ಕಳಿಗೆ
ದಲು ನಾಟ್ಯಸಂಗೀತ ನಾಟಕಗಳಲ್ಲಿ ತರಬೇತಿ
ದನೆಂದು ಐತಿಹ್ಯ.

ನಾಟ್ಯಶಾಸ್ತ್ರದಲ್ಲಿ ಇಂದ್ರಾದಿ ವಿಷ್ಣುದೇವತೆಗಳ
ಲ್ಲೇಖವಿದ್ದರೂ ಶಿವನೇ ಆದಿದೈವ. ಕಾಶ್ಮೀ
ಪಂಡಿತ ಅಭಿನವಗುಪ್ತನು ಬರೆದ ವ್ಯಾಖ್ಯಾ
ೀ ನಾಟ್ಯಶಾಸ್ತ್ರವನ್ನು ಅರ್ಥ ಮಾಡಿಕೊಳ್ಳುವಲ್ಲಿ
ಮ ಸಾಧನೆ. ಈ ಗ್ರಂಥದ ಹೆಸರೇ ಅಭಿನವ
ರತೀ. ಈ ಶತಮಾನದ ಆರಂಭದಲ್ಲಿ ಬರೋ
ಓರಿಯಂಟಲ್ ಇನ್ಸ್ಟಿಟ್ಯೂಟಿನವರು ಈ ಗ್ರಂಥ
ನ್ನು ಮೊದಲಬಾರಿಗೆ ಪ್ರಕಟಿಸಿದರು. ನಮ್ಮಲ್ಲಿ ಭರ
ನಾಟ್ಯಶಾಸ್ತ್ರದ ಹಲವಾರು ಪ್ರತಿಗಳು ದೊರ
. ಈ ಮೊದಲು ಮುಂಬೈ ಕಾಶಿ ಮತ್ತು ಬರೋ
ಗಳಿಂದ ನಾಟ್ಯಶಾಸ್ತ್ರ ಪ್ರಕಟವಾಗಿದೆ. 1967
ಕಲ್ಕತ್ತೆಯ ಡಾ. ಮನಮೋಹನ್ ಘೋಷ
ವರು ಸಂಪಾದಿಸಿದ ಪ್ರಕಟಿಸಿದ ನಾಟ್ಯಶಾಸ್ತ್ರವೇ
ಕ್ಕೀಚಿನದು.

# ನಾಟ್ಯಾಚಾರ್ಯ ಭರತ

---ಗುರುಮೂರ್ತಿ ಪೆಂಡಕೂರು.

ಮೂವತ್ತಾರು ಮೂವತ್ತೇಳು ಅಧ್ಯಾಯದ ನಾಟ್ಯಶಾಸ್ತ್ರವು ಒಂದು ವಿಶ್ವಕೋಶದಂತಿದೆ. ಶ್ಲೋಕ ಛಂಧಸ್ಸಿನಲ್ಲಿ ರಚಿತವಾಗಿದ್ದರೂ ನಡುನಡುವೆ ಗದ್ಯದ ಅಖ್ಯಾಯಿಕೆಗಳಿವೆ. ಈ ಗ್ರಂಥದಲ್ಲಿ ಸ್ವರ್ಗದಿಂದ ಭೂಲೋಕಕ್ಕೆ ನಾಟಕದ ಅವತರಣ ವಿಧ ವಿಧವಾದ ರಂಗಮಂಟಪಗಳ ವಿವರ, ರಂಗ ಪೂಜೆಯ ನಾನಾವಿಧ, ತಾಂಡವನೃತ್ಯದ ವಿವರ, ಅಭಿನಯ ಭಾವ ಮತ್ತು ಮುದ್ರೆಗಳ ವಿವರ, ಬೇರೆ ಬೇರೆ ಪಾತ್ರಗಳು ಬಳಸಬೇಕಾದ ಭಾಷೆ, ವೇಷಭೂಷಣ, ಸಂಗೀತದ ಅಳವಡಿಕೆ, ರಸ ಭಾವ ಅಲಂಕಾರ ಮತ್ತು ಗುಣಗಳ ವಿವರ- ಹೀಗೆ ನೂರಾರು ರೀತಿಯ ವಿವರಗಳನ್ನು ಸಮಗ್ರವಾಗಿ ನೀಡಲಾಗಿದೆ. ಪಂಡಿತರಾದ ಲೊಲ್ಲಟ ಶಂಕುಕ ಮತ್ತು ಅಭಿನವಗುಪ್ತರು ನಾಟ್ಯಶಾಸ್ತ್ರದ ಮೇಲೆ ವ್ಯಾಖ್ಯಾನಗಳನ್ನು ಬರೆದಿದ್ದಾರೆ. ಭರತನ ಪ್ರಕಾರ ನಾಟ್ಯ ಮತ್ತು ನಾಟಕದಿಂದ ಹೊರತಾದ ಕುಶಲಕಲೆ, ಲಲಿತಕಲೆ ಅಥವಾ ಕಲೆಗಳೇ ಇಲ್ಲ.



ಬದುಕಿನ ಕಷ್ಟಕೋಟಲೆಯಲ್ಲಿ ಜರ್ಝರಿತರಾದ ಸಾಮಾನ್ಯ ಜನರಿಗೆ ಮನೋರಂಜನೆಯನ್ನು ನೀಡುವುದೇ ನಾಟಕದ ಉದ್ದೇಶ. ನಾಟಕವೆಂದರೆ ಗಂಭೀರವಾದ ಶೈಲಿಯ ಗಂಭೀರ ಪಾತ್ರಗಳ ನಟನೆ ಪ್ರಕರಣವೆಂದರೆ ಪ್ರಹಸನ - ಹಾಸ್ಯನಾಟಕ. ಭರತನು ಸಂಧಿ ಮತ್ತು ಸಂಧ್ಯಂಗಗಳ ಬಗ್ಗೆ ವಿವರವಿವರವಾಗಿ ನಿಗದಿ ಮಾಡಿದ್ದಾನೆ. ನಾಟಕಗಳನ್ನು ಅಂಕಗಳೆಂದು ವಿಭಾಗಿಸಿದ್ದರೂ ಕಾಲ ಮತ್ತು ನಿರೂಪಣೆಯಲ್ಲಿ ಆ ಖಂಡತೆಯನ್ನು ಕಾಪಾಡಲಾಗುತ್ತದೆ.

ಭರತನು ನಾಟಕದಲ್ಲಿ ಅನೇಕ ಸಂಪ್ರದಾಯಗಳನ್ನು ನಿರ್ಮಿಸಿದ್ದಾನೆ. ಉದಾಹರಣೆಗೆ ನಾಂದಿ ಪ್ರಕರಣ ಮತ್ತು ಸೂತ್ರದಾರನ ಕರ್ತವ್ಯಗಳು. ನಾಟಕದ ಎಲ್ಲ ಹಂತದಲ್ಲಿ ನಾಟ್ಯಶಾಸ್ತ್ರವು ವಿಷಯಗಳನ್ನು ನಿಗದಿ ಮಾಡಿದೆ. ಪಾತ್ರಗಳ ವೇಷ ಭೂಷಣ ಅವರಾಡುವ ಮಾತು ಮಧ್ಯೆ ಮಧ್ಯೆ ಸಂಗೀತ ಮತ್ತು ನೃತ್ಯದ ಬಳಕೆ ಹೀಗೆ ನಾಟಕದ ಬಗ್ಗೆ ಸಮಗ್ರವಾಗಿ ಯೋಚಿಸಿ ಬರೆದ ಭರತನ ಪಾಂಡಿತ್ಯ ಮತ್ತು ಅನುಭವಗಳ ಬಗ್ಗೆ ಆಶ್ಚರ್ಯವೆನಿಸುತ್ತದೆ.

ಎಲ್ಲಕ್ಕಿಂತ ಹೆಚ್ಚಾಗಿ ಭರತನು ಕಲೆಗಳಲ್ಲಿ ಪ್ರತಿಪಾದಿಸಿದ ರಸತತ್ವ. ಎಲ್ಲ ಕಲೆಗಳ ಉದ್ದೇಶವೇ ರಸಾನುಭವ ಸೃಷ್ಟಿ. ಮನುಷ್ಯನ ಭಾವ ಲೋಕದೊಂದಿಗೆ ಸ್ಪಂದಿಸಿ ವಿಶಿಷ್ಟವಾದ ಆನಂದಮಯ ರಸಾನುಭವವನ್ನು ನೀಡುವುದೇ ಎಲ್ಲ ಕಲೆಗಳ ಗುರಿಯೆಂದು ಭರತನ ಅಭಿಪ್ರಾಯ ಆದ್ದರಿಂದ ನಟ, ನಾಟಕದ ಮತ್ತು ರಂಗ ಕರ್ಮಿಗಳೆಲ್ಲ ಭಾವುಕರಾಗಿರಬೇಕೆಂದು ಭರತನ ಬಯಕೆ. ಅವನ ಅಭಿಪ್ರಾಯದಂತೆ - ರಸವಿಲ್ಲದ ಭಾವವಿಲ್ಲ. ಭಾವವಿಲ್ಲದ ರಸವಿಲ್ಲ. ರಸಭಾವಗಳ ಸೂಕ್ತ ಸಮ್ಮಿಲನವೇ ನಾಟಕದ ಯಶಸ್ಸಿಗೆ ಕಾರಣ. ರಂಗಸ್ಥಳದ ಭಾವಗಳು ಪ್ರೇಕ್ಷಕನಲ್ಲಿ ಪ್ರತಿಧ್ವನಿಯಾದರೆ ರಸಾನುಭವ ಸಾಧ್ಯವಾಗುತ್ತದೆ.

ನಾಟ್ಯಶಾಸ್ತ್ರ ಅತ್ಯುನ್ನತ ಕಲೆ, ಬೋಧ, ಮೋದಗಳನ್ನು ಏಕಕಾಲದಲ್ಲುಂಟಾಗಿಸುವಂತಹದ್ದು. ಜಗತ್ತಿನ ಜನಾಂಗಗಳು ಇನ್ನೂ ಬಾಲ್ಯದಲ್ಲಿದ್ದಾಗಲೇ ಭಾರತದಲ್ಲಿ ನಾಟ್ಯಶಾಸ್ತ್ರದ, ಮಟ್ಟಕ್ಕೆ ಏರಿ ಶಿಸ್ತಿನಿಂದ ಅಧ್ಯಯನ ಮಾಡುವಂತೆ ಆಗಿದ್ದಿತು ಎಂದರೆ ಅದಕ್ಕೆ ಮೂಲಕಾರಣ ಭರತ. ನಾಟ್ಯಶಾಸ್ತ್ರದ ಪಿತಾಮಹ ಎಂದೇ ಅವನ ಪ್ರಸಿದ್ಧಿ.

## ಶ್ರೀ ವೆಂಕಟೇಶ್ವರ ಕೇಂದ್ರ ಗ್ರಂಥಾಲಯ ಸಂಶೋಧನ ಕೇಂದ್ರ -- ತಿರುಪತಿ

# ಒಂದು ವಿನಂತಿ

1993 ರಲ್ಲಿ ತಿ.ತಿ.ದೇ. ಆಡಳಿತ ಮಂಡಳಿಯ ವಜ್ರಮಹೋತ್ಸವ ವರ್ಷದಲ್ಲಿ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ, ಸಂಶೋಧನ ಕೇಂದ್ರವನ್ನು ನೆಲೆಗೊಳಿಸಿ ಅದನ್ನು ಸ್ವಾಮಿ ಭಕ್ತರ ಸೇವೆಯಲ್ಲಿ ಸಮರ್ಪಿಸಲಾಯಿತು. ನಮ್ಮ ಪರಂಪರೆಯ ವಾಸ್ತುಶಿಲ್ಪದ ಹಾಗೂ, ಆಧುನಿಕ ವಾಸ್ತುಶಾಸ್ತ್ರದ ಉತ್ತಮಾಂಶಗಳನ್ನು ಒಳಗೊಂಡು ನಿಂತಿರುವ ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಅಪೂರ್ವ ಪುಸ್ತಕಾಗಾರವಾಗಿ ವೇದೋಪನಿಷತ್ತುಗಳ, ಇತಿಹಾಸ ಪುರಾಣಗಳ, ಶಾಸ್ತ್ರ ಭಗವದ್ಗೀತೆಗಳ ಉಪಾದೇಯವೂ ಭವ್ಯವೂ ಆದ ಸಂದೇಶವನ್ನು ಪ್ರಸಾರ ಮಾಡುವ ಉದ್ದೇಶ ಹೊಂದಿದೆ.

ಸನಾತನ ಧರ್ಮದ ವೈವಿಧ್ಯಮಯ ಮುಖಗಳ, ಭಾರತೀಯ ಚಿಂತನಶೀಲತೆಯ, ತತ್ವ, ಧರ್ಮ, ಸಂಗೀತವೇ ಮೊದಲಾದ ಪರಂಪರಾಗತ ಸಂಪದ್ಭರಿತ ಸಂಸ್ಕೃತಿಯಲ್ಲಿ ಸಂಶೋಧನೆ ನಡೆಸಲು ಅವಕಾಶವನ್ನು ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಕಲ್ಪಿಸುವುದು. ಭಾರತೀಯ ಶಾಸ್ತ್ರದ ಬಗ್ಗೆ ಅಪರೂಪವೂ, ಅಮುದ್ರಿತವೂ ಆದ ಅಂಶಗಳನ್ನು ಪ್ರಕಟಿಸುವುದೂ, ಸಂಸ್ಕೃತಪಾಠಗಳ ಮೂಲ ಪ್ರತಿಗಳನ್ನೂ ಅವುಗಳ ಸರಳಾನುವಾದಗಳನ್ನೂ ಪ್ರಕಟಿಸುವುದೂ, ನಮ್ಮ ಉದ್ದೇಶವಾಗಿದೆ. ಈ ಪುಸ್ತಕ ಭಂಡಾರವು ಭಾರತೀಯ ಸಂಸ್ಕೃತಿಯ ದೇವಾಲಯವಾಗಿ, ಶಿಕ್ಷಣ, ಸಂಶೋಧನೆಯ ಮಹತ್ ಸಂಸ್ಥೆಯನ್ನಾಗಿ ಮಾಡುವುದೇ ನಮ್ಮ ಪವಿತ್ರತಮ ಕರ್ತವ್ಯವಾಗಿದೆ. ಇಡೀ ಯೋಜನೆ ಸಾಕಷ್ಟು ಸಂಪನ್ಮೂಲವನ್ನು ಅಪೇಕ್ಷಿಸುತ್ತದೆ.

ಹೀಗಾಗಿ, ಸಾರ್ವಜನಿಕರಲ್ಲಿ, ಸ್ವಯಂಸೇವಾ ಸಂಸ್ಥೆಗಳಲ್ಲಿ ಧನದ ರೂಪದಲ್ಲಿ ಆಗಲೀ, ಪುಸ್ತಕ ರೂಪದಲ್ಲಿಯಾಗಲೀ ಉದಾರವಾದ ದೇಣಿಗೆಗಳನ್ನು ನೀಡಬೇಕೆಂದು ಮನವಿ ಮಾಡುತ್ತೇವೆ.

ವ್ಯಕ್ತಿಗಳು ಹಾಗೂ ಸಂಸ್ಥೆಗಳು ತಮ್ಮಲ್ಲಿನ ಅಪರೂಪದ ಪುಸ್ತಕಗಳನ್ನೂ ಗ್ರಂಥಾಲಯಕ್ಕೆ ನೀಡಬಹುದು.

ತಮ್ಮ ಎಲ್ಲ ದೇಣಿಗೆಗಳನ್ನು ಪುಸ್ತಕವಾಗಲೀ, ಹಣವಾಗಲೀ ಕಳುಹಿಸಬೇಕಾದ ವಿಳಾಸ -- ವಿಶೇಷಾಧಿಕಾರಿ, ಶ್ರೀ ವೆಂಕಟೇಶ್ವರ ಕೇಂದ್ರಗ್ರಂಥಾಲಯ ಹಾಗೂ ಸಂಶೋಧನ ಕೇಂದ್ರ -- **ತಿರುಪತಿ** -- 517 502.

ಭರತನ ಪ್ರಕಾರ ರಸವೆಂದರೆ ಪ್ರಜ್ವಲಿತ ಸ್ಥಾಯಿ ಭಾವಗಳು. ಅವನಂತೆ ರತಿ, ಉತ್ಸಾಹ (ಶೃಂಗಾರ) ವೀರ, ಕರುಣ ಇತ್ಯಾದಿ ಭಾವಗಳು. ಒಂದು ಕೃತಿಯಲ್ಲಿ ಎಲ್ಲ ರಸಗಳನ್ನು ಪೋಷಿಸುತ್ತಾ ಆದ್ಯಂತವಾಗಿ ಪ್ರವಹಿಸುವ ಒಂದು ಸ್ಥಾಯಿ ಭಾವವೇ ಕೃತಿಯ ಜೀವವಾಗಿರುತ್ತದೆ. ಹಾಗಾಗಿ ನಾಟಕದಲ್ಲಿ ಎಲ್ಲಾ ರಸಗಳು ಬಂದು ಹೋಗಲು ಅವಕಾಶವಿದೆ.

ಭರತನ ರಸತತ್ವವನ್ನು ಪ್ರಪಂಚದಾದ್ಯಂತ ಮೆಚ್ಚಲಾಗಿದೆ. ಲೊಲ್ಲಟನ ಪ್ರಕಾರ ಜೀವನದ ಭಾವಗಳಿಗೂ ಸಾಹಿತ್ಯದ ಭಾವಗಳಿಗೂ ಭೇದವಿಲ್ಲ.

ಶಂಕುಕನ ಪ್ರಕಾರ ರಸವು ಕಲೆಯ ರಮ್ಯತೆಯ ಮೂಲಕ ಆವಿರ್ಭವಿಸುವ ಸಹಜ ಸ್ವಭಾವ. ಭಟ್ಟನಾಯಕನ ಪ್ರಕಾರ ರಸವೆಂದರೆ ಆನಂದಾನುಭೂತಿ ಅಭಿನವ ಗುಪ್ತನ ಪ್ರಕಾರ ರಸವೆಂದರೆ - ಧ್ವನಿ ತತ್ವದ ಕುಶಲ ಉಪಯೋಗದಿಂದ ಕಲಾರಂಗದಲ್ಲಿ ಸಂಚಾರಗೊಳ್ಳುವ ರೋಮಾಂಚಕ ಆನಂದಮಯ ಭಾವ. ಕಾವ್ಯಭಾಷೆ ಮತ್ತು ಸಾಹಿತ್ಯದ ನಾನಾ ಪ್ರಯೋಗಗಳಿಂದ ನಾನಾ ಅನುಭವಗಳ ಮೂಲಕ ರಸಾನುಭವ ಸಾಧ್ಯವಾಗಿದೆ.

ನಾಟಕದಲ್ಲಿ ಅಗ್ರಜರೆನಿಸಿದ್ದ ಗ್ರೀಕರಿಗಿಂತ ಭಾರತೀಯರು ಬಹಳ ಹಿಂದೆಯೇ ನಾಟ್ಯ ಸಂಗೀತ ನಾಟಕಗಳ ಬಗ್ಗೆ ತಮ್ಮದೇ ಆದ ಶಾಸ್ತ್ರ ಪ್ರಯೋಗ ಮಾಡಿ ಪ್ರಸಿದ್ಧರಾಗಿದ್ದರೆನ್ನುವುದಕ್ಕೆ ಭರತನೇ ಸಾಕ್ಷಿ

★★★★★★★★

## ಶ್ರೀ ಬಾಲಾಜೀ ವಿಕಲಾಂಗ ಆಸ್ಪತ್ರೆ
## ತಿ. ತಿ. ದೇ. ತಿರುಪತಿ.

ತಿರುಮಲೆ ತಿರುಪತಿ ದೇವಸ್ಥಾನಗಳ ಶ್ರೀ ಬಾಲಾಜೀ ವಿಕಲಾಂಗರ ಆಸ್ಪತ್ರೆಯಲ್ಲಿ ಕೃತಕ ಅವಯವಗಳನ್ನು ವಿಕಲಾಂಗರಿಗೆ ಉಚಿತವಾಗಿ ನೀಡುವ ಯೋಜನೆಯಿದ್ದು, ಸದರಿ ಮಾನವೋಪಯೋಗಿ ಯೋಜನೆಗೆ ದಾನಿಗಳು ಉದಾರವಾಗಿ ವಂತಿಗೆಯನ್ನು ನೀಡಲು ಅವಕಾಶವಿದೆ.

ದಾನಿಗಳು ಈ ಅವಕಾಶವನ್ನು ಬಳಸಿಕೊಂಡು ಈ ಘನೋದ್ದೇಶದ ಯೋಜನೆಯ ಸಾಫಲ್ಯಕ್ಕೆ ನೆರವಾಗಬೇಕೆಂದು ಬೇಡಲಾಗಿದೆ.

**ತಿ. ತಿ. ದೇ.**

ಶ್ರೀರಂಗಮಂಗಳ ಮಣಿಂ
ಕರುಣಾನಿವಾಸಂ
ಶ್ರೀ ವೇಂಕಟಾದ್ರಿ ಶಿಖರಾಲಯ
ಕಾಳಮೇಘಮ್
ಶ್ರೀ ಹಸ್ತಿಶೈಲ ಶಿಖರೋಜ್ವಲ
ಪಾರಿಜಾತಂ
ಶ್ರೀಶಂ ನಮಾಮಿ
ಶಿರಸಾ ಯದುಶೈಲದೀಪಮ್

ಶ್ರೀರಂಗ, ತಿರುಮಲೈ-ತಿರುಪತಿ, ಕಾಂಚೀಪುರ, ಾದವಗಿರಿ (ಮೇಲುಕೋಟೆ) ಈ ನಾಲ್ಕೂ ಶ್ರೀವೈ ವರ ಅತ್ಯಂತ ಪ್ರಸಿದ್ಧ ಸ್ವಯಂವ್ಯಕ್ತ ಪ್ರಾತಃಸ್ಮರ ಯ ಯಾತ್ರಾಸ್ಥಳಗಗಳು. ಕರ್ನಾಟಕದ ರಾಜ ನಿ ಬೆಂಗಳೂರಿನಿಂದ ಸುಮಾರು ನೂರುಮೈ ಮೂರ, ಮೈಸೂರಿನಿಂದ ಉತ್ತರಕ್ಕೆ ೩೨ ಮೈಲಿ ಾರದಲ್ಲಿದೆ. ಸಮುದ್ರಮಟ್ಟಕ್ಕೆ ೨೫೭೯ ಅಡಿ ಎತ್ತ ನಲ್ಲಿದೆ. ಇಲ್ಲಿನ ಶ್ರೀ ಯದುಗಿರಿ ತಾಯಾರಿನಂತೆ ಲ್ಲಿ ಪ್ರಕೃತಿಮಾತೆ ಸದಾ ಹಚ್ಚಹಸಿರು ನಗುತ್ತ, ಶ್ರೀ ೋಗಾನೃಸಿಂಹರ ಬೆಟ್ಟದಡಿಯ ಕಲ್ಯಾಣಿ ಪುಷ್ಕರಿ ಯಲ್ಲಿ ತನ್ನ ಪ್ರತಿಬಿಂಬ ಪ್ರತಿಫಲಿಸುತ್ತ, ಆರೋಗ್ಯ ಮವಾಗಿ ಶಾಂತಿ ಸೌಖ್ಯ ನೀಡುತ್ತಿದ್ದಾಳೆ.

ಊರು ಬಡಗಣ ಕೊನೆಯಿಂದ ಒಂದು ಮೈಲಿ ರಕ್ಕೆ ಪ್ರಾರಂಭಿಸಿ ಅರ್ಧಮೈಲಿ ಚದುರದಲ್ಲಿ ರಡಿದೆ. ಊರ ಸುತ್ತಲೂ ಇರುವ ಶಿಥಿಲಕೋಟೆ ೋಡೆ, ಬೆಟ್ಟದ ಮೇಲಿನ ಕೋಟೆ ಎನಿಸಿ 'ಮೇಲು ೋಟೆ' ಆಗಿರಬಹುದು. ವಿಶಿಷ್ಟಾದ್ವೈತ ದರ್ಶ ವನ್ನು ಬೆಳೆಸಿ ಬೆಳಗಿಸಿದ ಭಗವನ್ ರಾಮಾನು ಾಚಾರ್ಯರು ಕ್ರಿ.ಶ. ೧೧೧೭ ರಲ್ಲಿ ಯದುಗಿ ಗೆ ದಯಮಾಡಿಸಿ ತಿರುನಾರಾಯಣ ದೇವಾಲಯ ೀರ್ಣೋದ್ಧಾರ ಮಾಡಿಸಿ, ದೆಹಲಿಯಿಂದ ಮುದ್ದು ಂಪತ್ಕುಮಾರ ಶ್ರೀ ಶೆಲ್ವಪಿಳ್ಳೆಯನ್ನು ಕರೆತಂದು ುತ್ಸವಗಳನ್ನು ಸುವ್ಯವಸ್ಥೆಗೊಳಿಸಿದರು.

ಈ ಭಗವತ್ಕಟಾಕ್ಷ, ನಂಬಿಕೆಯ ಕೋಟೆ ಶ್ರೀ ವೈಷ್ಣವ ಭಕ್ತರನ್ನು ರಕ್ಷಿಸುತ್ತಿರುವುದೇ 'ಮೇಲು ಕೋಟೆ'. ಇದನ್ನು ಸುಭದ್ರ ರಕ್ಷಿಸುವುದು ಮೇಲು. ಶ್ರೀ ರಾಮಾನುಜರು ಬಿತ್ತಿದ ಭಕ್ತಿಪಂಥವಾಹಿನಿ, ಪಂಚನಾರಾಯಣ ದೇವಸ್ಥಾನಗಳಿಂದ ಹರಿದು ವೇದವಾಹಿನಿ - ನಾದವಾಹಿನಿಯಾಗಿ ಇಂದಿಗೂ ಜೀವನ ಪಾವನಗೊಳಿಸುತ್ತಿದೆ.

ಅದೇ ರೀತಿ ಶ್ರೀ ವೇದಾನ್ತ ದೇಶಿಕರೂ ಯಾದ ವಗಿರಿಯಲ್ಲಿ ೧೨ ವರ್ಷ ನೆಲೆಸಿ ಶ್ರೀ ವೈಷ್ಣವ ಸಂಪ್ರ ದಾಯ - ಸಂಸ್ಕೃತಿ ಬೆಳೆಸಿ ಬೆಳಗಿದರು. ಕ್ರಿ.ಶ. ೧೫೭೬ - ೧೪೨೩ ರಲ್ಲಿ ಆಳಿದ ಮೈಸೂರು ರಾಜ



# ತಿರುನಾರಾಯಣಪುರ

---ಎಂ. ಸಿ. ನರಸಿಂಹನ್.

ವಂಶದ ಪ್ರವರ್ತಕರಾದ ಯದುರಾಯರೇ ಇಲ್ಲಿನ ಕೋಟೆ ಕಟ್ಟಿಸಿದರೆನ್ನುವರು. ಬಹು ಪುರಾಣ ಪ್ರಸಿದ್ಧಕ್ಷೇತ್ರ. ನಾರದೀಯಪುರಾಣದ ಜ್ಞಾನಕಾಂಡದ ಶ್ರೀಯಾದವಗಿರಿ ಮಹಾತ್ಮ್ಯವು ೧೨ ಅಧ್ಯಾಯಗಳಲ್ಲಿ ವರ್ಣಿತವಾಗಿದೆ. 'ದಕ್ಷಿಣ ಬದರಿಕಾಶ್ರಮ' 'ವೈಕುಂಠವರ್ಧನ ಕ್ಷೇತ್ರ' ಎಂದೂ ಪ್ರಸಿದ್ಧ. ಕೃತಯುಗದಲ್ಲಿ ನಾರಾಯಣಾದ್ರಿ, ತ್ರೇತಾಯುಗದಲ್ಲಿ ದತ್ತಾತ್ರೇಯರಿಂದ 'ವೇದಾದ್ರಿ' ಎಂದೂ, ದ್ವಾಪರಯುಗದಲ್ಲಿ ಶ್ರೀ ಬಲರಾಮ, ಶ್ರೀಕೃಷ್ಣರಿಂದ 'ಯಾದವಾದ್ರಿ' ಎಂದೂ ಕಲಿಯುಗದಲ್ಲಿ ಅವತರಿಸಿದ ಯತಿರಾಜರಿಂದ 'ಯತಿಶೈಲ' ಎಂದೂ 'ತಿರುನಾರಾಯಣಪುರ' ಪ್ರಸಿದ್ಧಿಹೊಂದಿದೆ. ಮೇಲುಕೋಟೆಯ ಮೂಲ ದೈವ ಶ್ರೀಮನ್ನಾರಾಯಣ, ಚತುರ್ಮುಖ ಬ್ರಹ್ಮನ ಆರಾಧ್ಯದೈವ. ನಿತ್ಯಾರಾಧನೆಯ ಅರ್ಚಾರೂಪಿ.

ನಾರಾಯಣನನ್ನು ಭಗವಂತನ ಸ್ವಪ್ನಾದೇಶದಂತೆ ಶ್ರೀರಾಮಾನುಜರು ಅಲ್ಲಿನ ಮುಗ್ಧ ಹಳ್ಳಿಗರ ಸಹಾಯದಿಂದ ಕ್ಷೀರಾಭಿಷೇಕ ಮಾಡಿಸಿ ಬಿಜಯಮಾಡಿಸಿದರು. ವಿಷ್ಣುವರ್ಧನನ ಮೂಲಕ ದೇವಾಲಯ ಜೀರ್ಣೋದ್ಧಾರ ಮಾಡಿಸಿದರು. ಶ್ರೀ ತಿರುನಾರಾಯಣನನ್ನು ಪುನಃ ಪ್ರತಿಷ್ಠೆ ಮಾಡಿಸಿದರು. ಅಂಥ ಮುಗ್ಧ ಹಳ್ಳಿಗರೇ ರಾಮಾನುಜರ 'ತಿರುಕುಲತ್ತಾರ್' (ಶ್ರೇಷ್ಠ ಭಕ್ತಿಕುಲದವರು) ಎನಿಸಿ ಇಂದಿಗೂ ಉತ್ಸವ ದರ್ಶನಕ್ಕಾಗಮಿಸುವರು. ದೇವಸ್ಥಾನದ ಎದಿರೇ ಯತಿರಾಜಮಠ, ದಕ್ಷಿಣಕ್ಕೆ ತೋತಾದ್ರಿ ಸ್ವಾಮಿ ಮಠ, ಉತ್ತರಕ್ಕೆ ಮಣವಾಳ ಮಾಮುನಿ ಸನ್ನಿಧಿ.

ಶ್ರೀ ತಿರುನಾರಾಯಣ ದೇವಸ್ಥಾನ ೨೮೦ ಅಡಿಗಳ ಚಚ್ಚೌಕದ ನಿರ್ಮಾಣ. ಸುತ್ತ ಕೈಸಾಲೆ. ಈ

> **ಭಗವದ್ರಾಮಾನುಜರು ಕರ್ನಾಟಕದಲ್ಲಿ ಬಹುವಾಗಿ ಪ್ರೀತಿಸಿದ ಸ್ಥಳ ತಿರುನಾರಾಯಣಪುರ, ಮೇಲುಕೋಟೆಯೆಂಬ ಈ ಸಣ್ಣ ಊರಿನ ದೈವ ಚೆಲುವನಾರಾಯಣ ಜಗತ್ಪ್ರಸಿದ್ಧ. ಯದುಶೈಲವೂ ಇದೇ. ಇಲ್ಲಿನ ವೈರಮುಡಿ ಉತ್ಸವ ದೇವತೆಗಳೂ ನೋಡಲು ಅಪೇಕ್ಷಿಸಿ, ನೂಕು ನುಗ್ಗಲು ಮಾಡಿಕೊಂಡು ಬರುವ ಉತ್ಸವ. ಇನ್ನೂ ಒಂದು ವೈಶಿಷ್ಟವೆಂದರೆ ಇಲ್ಲಿನ ಸರ್ವ ಸಮಾನತೆ. ವೇದಾಂತದೇಶಿಕರೂ ಪರಮಪ್ರೀತಿಯಿಂದ ಇಲ್ಲಿ ಸ್ವಲ್ಪದಿನವಿದ್ದರು, ಇಲ್ಲಿನ ಯೋಗಾನರಸಿಂಹನೂ ಪ್ರಸಿದ್ಧ.**

ಬ್ರಹ್ಮಪುತ್ರ ಸನತ್ಕುಮಾರರು ಭೂಲೋಕದಲ್ಲಿ ಅವರನ್ನು ಪ್ರತಿಷ್ಠಾಪಿಸಿದರು.

ಶ್ರೀ ಯದುಗಿರಿ ತಾಯಾರ್ ಅವರೇ ಪ್ರಕೃತಿ ಮಾತೆಯಾಗಿ ಸಂಪಿಗೆವನ, ಗಂಧದಮರ, ತುಲಸೀತೋಟ, ಹೂದೋಟ, ಪುಣ್ಯತೀರ್ಥ - ಕೊಳ, ಬೆಟ್ಟ- ಬಂಡೆಗಳಾಗಿ ಕರುಣೆವರ್ಷಸುರಿಯುತ್ತಾರೆ. ರಾಜಬೀದಿಯ ಇಕ್ಕೆಲ ಸಾಲಾಗಿ ಅಂಗಡಿಗಳು, ದೇವರ ಚಿತ್ರಗಳು, ನೆನಪಿನ ಕಾಣಿಕೆಗಳು - ಪ್ರವಾಸಿಗ ಯಾತ್ರಿಕರಿಗೆ ಕಣ್ಮನಸೂರೆ!! ಸ್ವಲ್ಪ ಮುಂದೆ ಬಂದರೆ, ಬದರೀವೃಕ್ಷದ ಎದುರಿಗೆ (ಅದಕ್ಕೆ ದಕ್ಷಿಣ ಬದರೀನಾಮ), ಅತಿ ವಿಶಿಷ್ಟವಾದ ಚತುರಾಕೃತಿ ಗೋಪುರದ ಸಹಿತ ಶ್ರೀ ತಿರುನಾರಾಯಣಸ್ವಾಮಿ ದೇವಸ್ಥಾನ, ಗರುಡಗಂಭ, ನಗಾರಿಗಳು, ರಾಜಒಡೆಯರ ಗಂಭೀರ ತೈಲಚಿತ್ರ. ಶ್ರೀ ರಾಮಾನುಜರ ನಿರ್ದೇಶನದಲ್ಲಿ ರಾಜಾ ವಿಷ್ಣುವರ್ಧನ (ಬಿಟ್ಟಿದೇವ ಕ್ರಿ.ಶ. ೧೧೪೧) ಕಟ್ಟಿಸಿದ ಪಂಚನಾರಾಯಣ ದೇವಸ್ಥಾನಗಳಲ್ಲಿ ಇದು ಒಂದು. ಭಾಷ್ಯಕಾರರಿಂದಲೇ ಈ ರಾಜಪುತ್ರಿಯ ಮಾನಸಿಕವ್ಯಾಧಿ ಗುಣವಾಯಿತು. ಹುತ್ತದಲ್ಲಿ ಹುದುಗಿದ್ದ ಶ್ರೀ ತಿರು

ಗೋಪುರ ಚಿಕ್ಕದು. ಒಳಗಡೆ ಪ್ರದಕ್ಷಿಣವಾಗಿ ಬಂದರೆ, ಒಂದು ಕೊಠಡಿಯಲ್ಲಿ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಮತ್ತು ನಾಲ್ವರು ರಾಣಿಯರಿದ್ದಾರೆ. ಆಳ್ವಾರ್‌ಗಳು, ಮಂತ್ರಸಿದ್ಧಿ ಪೂರಿತ ಸುದರ್ಶನಾಳ್ವಾರ್, ತಿರುಕ್ಕಚ್ಚಿನಂಬಿ. ಮುಂದೆ ಶ್ರೀ ಯದುಗಿರಿ ತಾಯಾರ್ ಸನ್ನಿಧಿ. ಚಾಮರ ಶಿಲ್ಪ ದ್ವಾರಪಾಲಕಿಯರು. ಪ್ರಾಂಗಣದ ಹೊಳೆಹೊಳೆವ ಕಂಭಗಳು (ಒಂದರಂತೆ ಮತ್ತೊಂದಿಲ್ಲ) ವಿವಿಧ ಕುಸುರಿ ಬಲು ನೈಪುಣ್ಯ.

ಯದುಗಿರಿ ತಾಯಾರ್ ತುಂಬ ವಾತ್ಸಲ್ಯಮಯಿ, ಪದ್ಮಹಸ್ತೆ, ಅಭಯ ವರದಹಸ್ತೆ, ಕರುಣೆ ವರ್ಷಿಸುವ ಆ ಕಣ್ಣುಗಳು, ಹೊಳೆವ ತಿಲಕ, ನಸುಬಾಗಿದ ಕೆಂಪಿನ ಮೂಗುತಿ, ಮುಗ್ಧ ಮುಗುಳುನಗೆ, ಕಣ್ಗಳ ಕಾಂತಿ, ನೀಳನಾಸಿಕ, ಪರಿಚಯದ ಆತ್ಮೀಯ ಮಂದಸ್ಮಿತದ ಅರೆತೆರೆದ ತುಟಿಗಳು - ಬಲು ಜಾಗೃತ ಸ್ಥಳದ ಅಮ್ಮನ ಸಾನ್ನಿಧ್ಯ. ರೋಮಾಂಚನವಾಗುವ ಅದ್ಭುತ ಅನುಭವ. ಮತ್ತೆ ಮತ್ತೆ ಹಿಂತಿರುಗಿ ನೋಡಿ ನಮಸ್ಕರಿಸಲು ಈ ಮಾತೆಯ ಕರುಣೆಯೇ ಕಾರಣ. ಆಡಿ

ಸುಪರಿತನೆಂಬ ಎಂಬ ಬಡ ಬ್ರಾಹ್ಮಣನ ಪುತ್ರ ನಾರಾಯಣ ಎಂಬ ಹುಡುಗನಿಗೆ ಮೃಷ್ಟಾನ್ನ ಭಿಕ್ಷೆ ರತ್ನಭಿಕ್ಷೆ ಇತ್ತಿದ್ದು ಈ ಮಾತೆಯೇ--

"ಮಾತಾ ಸರ್ವಸ್ಯಾ ಲೋಕಸ್ಯ
ಮಧುಸೂದನ ಮಾನಿನೀ
ದರ್ವೀ ಮಾದಾಯ ಬಾಲಸ್ಯ
ದಧೌಭಿಕ್ಷಾಂ ಗೃಹೇ ಗೃಹೇ

ಗಜೇಂದ್ರವರದರ ನಂತರ ತೆಂಕಮೊಗನಾಗಿ ಶ್ರೀರಾಮಾನುಜಾಚಾರ್ಯರ ಸನ್ನಿಧಿ. ತಾವು ಶ್ರೀರಂಗಕ್ಕೆ ತೆರಳುವ ಮುನ್ನ ತಮ್ಮ ಜೀವಕಳೆ ತುಂಬಿ ಶಿಷ್ಯರಿಗೆ ಕೊಟ್ಟು 'ಮಾತನಾಡುವ ಮಹಾಮುನಿ' (ಪೇಶುಂರಾಮಾನುಜರ್) ಎಂದೇ ಪ್ರಸಿದ್ಧ. ಎಲ್ಲರಲ್ಲಿ ಇರುವ ಶ್ರೀಮನ್ನಾರಾಯಣನಿಗೆ ನಮಿಸಿ ಮುಗುಳ್ನಗುತ್ತಿರುವ ಸುಂದರ ಮೂರ್ತಿ. ಗುರುವಿಗಾಗಿ ಕಣ್ಣುನೀಡಿದ ಶ್ರೀ ಕೂರತ್ತಾಳ್ವಾರ್ ಸನ್ನಿಧಿ. ಶ್ರೀರಂಗನನ್ನು ರಕ್ಷಿಸಿ ರಂಗೈಕ್ಯರಾದ ಪಿಳ್ಳೆ ಲೋಕಾಚಾರ್ಯರು, ತಿರುಮಂಗೈಯಾಳ್ವಾರ್‌ಗಳ ಸನ್ನಿಧಿಗಳು. ಯಾಗಶಾಲೆ ದೊಡ್ಡ ಪ್ರಾಂಗಣದ ನವರಂಗದ ಎಡಪಕ್ಕದಲ್ಲಿ ಬಡಗುಮುಖವಾಗಿ

ಶ್ರೀ ಚೆಲುವರಾಯ ಶ್ರೀದೇವಿ-ಭೂದೇವಿಯರೊಡಗೂಡಿ, ಶಂಖಚಕ್ರ, ಅಭಯಮುದ್ರೆ ಗದಾ ಸಹಿತ ಭುವನಮೋಹಕ ಮುಗಳ್ನಗೆಯೊಡನೆ ನಿಂತಿದ್ದಾರೆ. ದೆಹಲಿ ಸುಲ್ತಾನನ ಷಹಜಾದೆಯ ಅಂತಃಪುರದಲ್ಲಿದ್ದ ಈ ಮುದ್ದು ಕಿಶೋರಕೃಷ್ಣನನ್ನು ರಾಮಾನುಜರು, 'ಓಡಿಬಾರೋ, ನನ್ನ ಶೆಲ್ವಪಿಳ್ಳೆ!' ಎಂದು ದೇಡಿದಾಗ, ಗುಡುಗುಡು ಓಡಿ ಬಂದು ರಾಮಾನುಜರ ತೊಡೆಯೇರಿ ಕುಳಿತು ಕಿಲಕಿಲನಕ್ಕ ಮುದ್ದು ಶೆಲ್ವನೇ ಈ ಸಂಪತ್ಕುಮಾರ! ಇವನನ್ನೇ ಹಿಂಬಾಲಿಸಿ ಓಡಿಬಂದು ಐಕ್ಯಳಾದಳು ಷಹಜಾದೆ ಬೀಬಿ ನಾಚ್ಚಿಯಾರ್. ಆಕೆಗಾಗಿಯೇ 'ಹೊಗರಿಗುಡಿ'. ಈ ಮೋಹನ ಚೆಲುವನಿಗಾಗಿಯೇ ವಿಶ್ವವಿಖ್ಯಾತ ವೈರಮುಡಿ ಬ್ರಹ್ಮೋತ್ಸವ! ಪ್ರಧಾನ ನವರಂಗದಲ್ಲಿಯೇ ಮೂಲದೇವರು ಮತ್ತು ಉತ್ಸವರು ಬಂದು ಅಪೂರ್ವ ಸೇವೆ.

ನೇರಕ್ಕೆ ಮೂಡಮೊಗವಾಗಿ ಶ್ರೀತಿರುನಾರಾಯಣಸ್ವಾಮಿಯ ಸುಕನಾಸಿ ಮತ್ತು ಗರ್ಭಗುಡಿ. ಸನ್ನಿಧಿಯ ಅಕ್ಕಪಕ್ಕದಲ್ಲಿ ಜಯ-ವಿಜಯ ದ್ವಾರಪಾಲಕರು. ಸ್ವಾಮಿಯ ದರ್ಶನದಲ್ಲಿ ಮೊದಲು ಗೋಚರಿಸುವವು ನೇರ ಊರಿನಿಂತ ದಿವ್ಯಪಾದಗಳು. ಮಡಿಕೆ ಮಡಿಕೆಯಾಗಿ ಮೇಲಕ್ಕೇರಿದ ಕೆಂಪಂಚಿನ ಶುಭ್ರ ಪಂಚೆ. ಅದನ್ನೇ ಎಡಕ್ಕೂ ಬಲಕ್ಕೂ ಅರ್ಧ ವೃತ್ತಾಕಾರವಾಗಿ ಪ್ರಭಾವಳಿಯನ್ನೂ ಅರ್ಧ ಮುಚ್ಚಿ ಅಲಂಕರಿಸುತ್ತಾರೆ.

ಕೌಮೋದಕೀ ಗದೆಯ ಮೇಲೆ ಸ್ವರ್ಣ ಕವಚದ ಸಹಿತ, ಎಡಹಸ್ತವನ್ನೂರಿದ್ದಾರೆ. ಚಿನ್ನದ ಡಾಬು, ಸ್ವರ್ಣಕವಚ ಹೊದ್ದಿಸಿದ ಉಂಗುರಗಳ ಸಹಿತ ಅಭಯಹಸ್ತ (ಇದು 'ಮಾಶುಚಃ' ಹೆದರಬೇಡ) ಎಂಬುದಕ್ಕೆ ಪ್ರತ್ಯಕ್ಷ ಸಾಕ್ಷಿ. ಹಾಗೆಯೇ ಪ್ರಯೋಗ ಶೈಲಿಯಲ್ಲೇ (ಭಕ್ತನ ಕರೆಗೆ ಓಗೊಟ್ಟು ಪ್ರತಿಕ್ಷಣವೂ ಕಾಯ್ದು ನಿಂತ ಬಲಗೈನ ಸ್ವರ್ಣ ಖಚಿತ ಸುದರ್ಶನ ಚಕ್ರ, ಎಡಗೈನ ಬಂಗಾರದ ಪಾಂಚಜನ್ಯ ಶಂಖ, ವಿಶಾಲ ವಕ್ಷಸ್ಥಳ, ಸ್ವರ್ಣ ರತ್ನಹಾರಗಳು, ಅರ್ಧ ವರ್ತುಲಾಕಾರದ ಭಾರಿ ಸಾಲಿಗ್ರಾಮ ಮಾಲೆಗಳು, ಇಳಿಬಿದ್ದ ಯಜ್ಞೋಪವೀತ, ಸ್ವರ್ಣ ಕರ್ಣಕುಂಡಲಗಳು, ಎಲ್ಲಕ್ಕಿಂತ ಅದ್ಭುತ, ಅತ್ಯಂತ ಸೌಮ್ಯ ಮಂದಸ್ಮಿತ ಮುಗುಳುನಗೆಯ ಬೆಳುದಿಂಗಳು. ಇದರ ಸೌಲಭ್ಯ ಸೌಶೀಲ್ಯತಾಕಿರಣ, ಸನ್ನಿಧಿಯೆಲ್ಲ ಪ್ರಸರಿಸಿ ಅಲೌಕಿಕ ಶಾಂತಿ, ಆನಂದ ನೀಡುತ್ತದೆ. ಕಣ್ಣುಗಳು ನೇರ ನಮನ್ನೇ ದೃಷ್ಟಿಸಿ ಕರುಣೆಯ ಮಳೆಯನ್ನೇ ಸುರಿಸುತ್ತವೆ. ಎರಡೂ ನೇತ್ರಗಳೂ ಪೂರ್ತಿ ಕಾಣುವಂತೆ ಸಣ್ಣಗಿನ ಶ್ರೀಚೂರ್ಣ, ತಿರುಮಣ್, ನೀಳನಾಸಿಕದ ಮೇಲೂ ಬಂದಿದೆ. ಶಿರದ ಮೇಲೆ ಎತ್ತರವಾದ ರತ್ನ ಖಚಿತ ಸ್ವರ್ಣ ಕಿರೀಟ. ವ್ಯಾಳಿಗಳ ಸಹಿತ ಚಿನ್ನದ ಪ್ರಭಾವಳಿ ಹಿಂದೆ ಇದೆ. ಪಾದಗಳ ಬಳಿ ದೇವಿ ನಾಚ್ಚಿಯಾರ್, ತಿರುಮುಖದ ಹಿಂದೆ ಪ್ರಭಾವಲಯ. ಎಂಥ ದಿವ್ಯ ಶಾಂತಿ! ಸೌಮ್ಯ ಕಾಂತಿ! (ಶ್ರೀಮನ್ನಾರಾಯಣ ಚರಣೌ ಶರಣಂ

ಪ್ರಪದ್ಯೇ.) ತಿರುಮಲೈ ವೆಂಕಟೇಶನ ಪರಮ ಭಕ್ತ ಶ್ರೀ ಅನಂತಾರ್ಯರು ವೇಂಕಟೇಶನನ್ನೂ ಇಲ್ಲೇ ದರ್ಶಿಸಿದರು! ವೈಕುಂಠಗಂಗೆ, ನಾರಾಯಣ ತೀರ್ಥ, 'ಪುಳಿಕಾಪ್' ಸೇವೆ ಇದಕ್ಕೆ ಸಾಕ್ಷಿ! ಮೈತ್ರೇಯ ತೀರ್ಥ, ಯಾದವನದಿ, ವೇದ ಪುಷ್ಕರಿಣೀ, ಪರಿದಾನಶಿಲೆ, ದರ್ಭತೀರ್ಥ, ಧನುಷ್ಕೋಟಿ (ಶ್ರೀರಾಮಶರತೀರ್ಥ) ಪರಾಶಿತೀರ್ಥ, ಪದ್ಮ ತೀರ್ಥ - ಹೀಗೆ ಅಷ್ಟತೀರ್ಥಗಳು ಈ ವೇದಾದ್ರಿಗೆ ವೇದಾಭರಣ. ಕಾರ್ತೀಕ ಶುದ್ಧ ದಶಮಿ ದಿನ ಶ್ರೀ ಶಠಾರಿ ಸಹಿತ ರಾಜಮುಡಿ ಸಹಿತ ಚೆನ್ನಿಗರಾಯನ ಉತ್ಸವ, ಭಕ್ತರಿಗೆ ಶ್ರೀರಕ್ಷೆ. ಸಂಜೀವಿನೀ ಪರ್ವತದಲ್ಲಿ ಒಂದು ಕೂಗು ಬಂಡೆ. ಮೇಲುಕೋಟೆಯ ಶತಾಯುಷಿ ಸಂಸ್ಕೃತ ಮಹಾವಿದ್ಯಾಲಯ ದೇಶದಲ್ಲೇ ದ್ವಿತೀಯ.

ಯಾದವಾದ್ರಿಯ ಎಲ್ಲ ತೀರ್ಥಗಳಿಗೂ ತಿಲಕಪ್ರಾಯದಂತೆ, ಜನಮನ ಪ್ರತಿಫಲಿಸುವ ಪುನೀತ ಪುಷ್ಕರಿಣಿ 'ಕಲ್ಯಾಣಿ'. ಈ ತಿಳಿ ನೀರಿನ ಥಳ ಥಳಸುವ ಜಲಗನ್ನಡಿಯಲ್ಲಿ ಶ್ರೀ ಯೋಗಾ ನೃಸಿಂಹ ಗಿರಿ, ಆತುಕೊಂಡು ಉರುಳಿ ಹೋಗುವ ಹಾಗಿರುವ ಹೆಬ್ಬಂಡೆಗಳು. ಆ ಗಿರಿಯ ಗೋಪುರ ಶುಭ್ರ ಬಿಂಬ ಪ್ರತಿಫಲಿಸುವ ನೋಟ ದಿವ್ಯ ಮನೋಹರ. ತೀರ್ಥದ ಪೂರ್ವತೀರದ ಸನ್ನಿಧಿಯಲ್ಲಿ ಭೂದೇವಿಯನ್ನು ಉದ್ಧರಿಸಿ ಆಕೆಗೆ ಚರಮಶ್ಲೋಕ ಉಪದೇಶಿಸಿದ ಎತ್ತರದ ಭೂವರಾಹಮೂರ್ತಿ, ಸರ್ವಾಭೀಷ್ಟಪ್ರದ.

ಸೀತಾರಣ್ಯ (ಶ್ರೀರಾಮ ಲಕ್ಷ್ಮಣರು ಇದ್ದ ತಾಣ.) ಪರಕಾಲಸ್ವಾಮಿ ಮಠ, ಕಾಂಚೀ ಅಳಹಿಯ ಮಣವಾಳ ಮಾಮುನಿ ಮಠ ಪಂಚಭಾಗವತ ಕ್ಷೇತ್ರ. ಆದಿಶೇಷನ ಸನ್ನಿಧಿ ಪವಿತ್ರ. ಮುಮ್ಮಡಿ ಕೃಷ್ಣರಾಜ ಒಡೆಯರ್ ಕಟ್ಟಿಸಿದ ಸುಂದರ ಭುವನೇಶ್ವರಿ ಮಂಟಪ. ಈ ತಾರ್ಕ್ಷಕ್ಷೇತ್ರದಲ್ಲಿ ಗರುಡ ತಂದ ಶ್ವೇತ ಮೃತ್ತಿಕೆ ಸಿಗುತ್ತದೆ.

ಶ್ರೀ ಯೋಗಾ ನೃಸಿಂಹಸ್ವಾಮಿ ಬೆಟ್ಟದ ಮುನ್ನೂರೊಂದು ಮೆಟ್ಟಿಲು ಹತ್ತಿ ನೃಸಿಂಹ ನಾರಾಯಣ ಸ್ಮರಣೆ ಮಾಡಿ, ಮಧ್ಯೆ ಪಾಂಡವರ ಗುಹೆ, ಕಿವುಡು ಭಟ್ಟರ ಸನ್ನಿಧಿ, ದೂರದಲ್ಲಿ ಬೀಬೀನಾಚ್ಚಿಯಾರ್ ಗುಡಿದರ್ಶನ, ಇವೆಲ್ಲ ಹತ್ತಿ ಬಲಕ್ಕೆ ತಿರುಗಿದರೆ ಅದೇ ಐದಂತಸ್ತಿನ ಭವ್ಯಗೋಪುರ ಪ್ರವೇಶದ್ವಾರ! ಅಷ್ಟು ಎತ್ತರದಲ್ಲಿ ನಿಂತು ಕೆಳಗೆ ಪಕ್ಷಿನೋಟ ನೋಡಿದರೆ ಹರಹಿದ ಮೇಲುಕೋಟೆ ಊರು, ಆ ಊರಿನ ರಂಗೋಲಿಯಂತೆ - ಕಲ್ಯಾಣಿ - ಕೆರೆ - ಕಣಿವೆ. ಗದ್ದೆ-ಗುಡ್ಡಗಳ ದೃಶ್ಯ ರಮಣೀಯ! ಪ್ರವೇಶ ದ್ವಾರ ದಾಟಿ ಒಳಬಂದು, ಪ್ರಾಂಗಣದಲ್ಲಿ ಸಾಷ್ಟಾಂಗ ಲೇಪಿಸಿ, ಸ್ವರ್ಣ ಲೇಪಿತ [illegible] ಮೆಟ್ಟಿಲು ಏರಿದರೆ, ಸ್ವರ್ಣಲೇಪಿತ ಲೋಹದ ಉಬ್ಬುಚ್ಚಿನಲ್ಲಿ ಶ್ರೀ ಯೋಗಾನೃಸಿಂಹರ ದಿವ್ಯದರ್ಶನ. ಸುತ್ತಲೂ ದಶಾವತಾರ. ಪ್ರದಕ್ಷಿಣೆಯಾಗಿ ಗರ್ಭಗುಡಿಯ ನವರಂಗ ಪ್ರವೇಶ. ಒಳಗೆ ಪ್ರದಕ್ಷಿಣ ಪಥವೂ ಉಂಟು. ಒಳಗೆ ಬಂದು ಭಗವಂತನ ಮುಂದೆ ಕೈಜೋಡಿಸಿ ನಿಂತರೆ ಒಂದು ಕ್ಷಣ ಆ ಅದ್ಭುತ ಪ್ರತ್ಯಕ್ಷದರ್ಶನಕ್ಕೆ ಮೈ 'ಝುಂ!' ಎನ್ನಿಸುತ್ತದೆ.

ಅತ್ಯಂತ ಬೃಹದ್ ಆಕಾರದ ಅಜಾನುಬಾಹು ಶ್ರೀಯೋಗಾ ನೃಸಿಂಹ. ಕೃಷ್ಣವರ್ಣ, ಹೊಳಿ ಹೊಳೆವ ಮೈ. ಯೋಗಾಸನದಲ್ಲಿ ಕುಳಿತು ಕಾಲುಗಳನ್ನು ಒಂದರ ಮೇಲೆ ಒಂದು ಮಡಿಚಿಕೊಂಡಿದ್ದಾರೆ. ಎರಡೂ ಮಂಡಿಗಳ ಮೇಲೆ ಇಳಿಬಿಟ್ಟ ನೀಳ ಕೈಗಳು. ಉಂಗುರಗಳೂ ನಖಗಳ ಹೊಳಪೂ, ಭುಜಕೀರ್ತಿಗಳ ಪ್ರಕಾಶವೂ ಮಂಡಿಗಳ ಮುಂದಿನ ಯೋಗ ಪಟ್ಟಿಕೆಯೂ, ಪಾದಗಳ ನಖದ ಸೌಂದರ್ಯವೂ ಅವರ್ಣನೀಯ. ಮಿಕ್ಕೆರಡು ಕೈಗಳಲ್ಲಿ ಸ್ವರ್ಣ ಶಂಖ ಚಕ್ರಧಾರಿಯಾಗಿ, ವಿಶಾಲ ವಕ್ಷಸ್ಥಳದಿಂದ ಕೂಡಿ, ಸಣ್ಣನಡು, ವಿಶಾಲ ಭುಜಗಳಿಂದ ಅತಿವೀರ ನೆಲೆಸಿದ್ದಾರೆ. ಸಕಲಾಭರಣ ಸಹಿತ, ತೆರೆದ ಆಳವಾದ ಹಿರಿಯಬಾಯಲ್ಲಿನ ಕೋರೆ ಹಲ್ಲುಗಳನ್ನೂ ಚೂಪಾದ ದಂತ ಪಂಕ್ತಿಗಳನ್ನೂ ನಗುನಗುತ್ತ ಪ್ರದರ್ಶಿಸುತ್ತಿದ್ದಾರೆ. ಭಾರಿ ಮೀಸೆ ಹೊತ್ತು, ಬಲು ಆಕರ್ಷಕ, ಮುಖ ತೇಜೋಮಂಡಲದಿಂದ ಕೂಡಿ, ಸೌಮ್ಯಕಳೆ ಪ್ರಕಾಶಿಸುತ್ತಾ, ನೇರ ನಮ್ಮನ್ನೇ ಈಕ್ಷಿಸುವ ದುಂಡಗಿನ ಹಿರಿಯ ನೇತ್ರಗಳಿಂದ ಮನಸ್ಸನ್ನೆಲ್ಲಾ ಆಕರ್ಷಿಸಿ ಆವರಿಸುವ ಪ್ರತ್ಯಕ್ಷದೈವ ಈ ಬೃಹತ್ ಯೋಗಾನರಸಿಂಹದೇವರು!

ಊರ್ಧ್ವಪುಂಡ್ರ ಎತ್ತರದ ಹಣೆಯೇ ಸೊಗಸು. ಸ್ವರ್ಣಾಭರಣ - ಕರ್ಣಕುಂಡಲಗಳಿಗೆ ಅವರ ತನು ಸೊಗಸು. ಕುರುಳು ಕೂದಲಿನ ಶಿರಕ್ಕೆ ಕೇಸರದ ಮುಡಿ ಸೊಬಗು. ಅದರ ಮೇಲೆ ಎತ್ತರದ ದುಂಡಗಿನ ದೊಡ್ಡ ಭಂಗಾರದ ಕಿರೀಟ, ಚಿನ್ನದ ಗರಿ, ಕೀರ್ತಿಕಳಶಕ್ಕೆ ಮೆರುಗು. ಪಟ್ಟೆ - ಪೀತಾಂಬರಧಾರಿಯಾಗಿ, ಅಗಣಿತಮಾಲೆ, ಆಭರಣಧರಿಸಿ, ಎರಡೂಕಡೆಯಿಂದ ಬಂದ ತೋಮಾಲೆ ಸುತ್ತಲಿನ ಪ್ರಭಾವಳಿಗೇ ಸೊಗಸು ಕೊಡುತ್ತಿರಲು 'ಹೇ! ನರಸಿಂಹಾ!' ಎಂದು ಭಕ್ತಿಯಿಂದ ಭಕ್ತರು ಕರೆದರೆ, ಸನ್ನಿಧಿಯಿಂದ ಎದ್ದು, ಹೊಸ್ತಿಲುದಾಟಿ, ಕಂಭಹಾರಿ ಓಡಿಬಂದೇ ಬರುತ್ತಾರೆಂಬ ದೃಢ ನಂಬುಗೆ ನೀಡುವ ಅತ್ಯಂತ ಜಾಗೃತ ಸ್ಥಳ ಇದು. ದರ್ಶನದಿಂದ ಪರಮಶಾಂತಿ ಖಂಡಿತ ಲಭ್ಯ. ಭಕ್ತಾಗ್ರೇಸರ ಪ್ರಹ್ಲಾದಗಳ ಹೊಳಹು ನೀಳ ನಖಗಳೂ, ದಂತ ಪಂಕ್ತಿಗಳ ಹೊಳಪೂ, ಕಣ್ಣುಗಳ ಕಾರುಣ್ಯದೃಷ್ಟಿಯೂ ದರ್ಶಿಸಿಯೇ ಅನುಭವಿಸಿರಿ!

"ಶ್ರೀಮದ್ಯಾದವ ಶೈಲಾಗ್ರ
ಶೇಖರಂ ಸದ್ಗುಣಾಕರಂ
ಯೋಗಾನಂದ ನೃಸಿಂಹಾಖ್ಯಂ
ದೈವತಂ ಪರ್ಯುಪಾಸ್ಮಹೇ

ಎದುರಿನ ಕನ್ನಡಿ, ನಮ್ಮ ಮನದ ಮುಕುರವೇ! ಅರ್ಚನೆ ದರ್ಶಿಸಿ ತೀರ್ಥಪ್ರಸಾದ ಶ್ರೀ ಶಠಾರಿ ಸ್ವೀಕರಿಸಿ ಮತ್ತೆ ಮತ್ತೆ ದರ್ಶನ ಬೇಡಿ ತಿರುತಿರುಗಿ ನೋಡುತ್ತಾ 'ಅಬ್ಬ! ಅಬ್ಬ!' ಎಂದು ಆ ಅದ್ಭುತ ದರ್ಶನಕ್ಕೆ ಅಚ್ಚರಿ, ಭ್ರಮೆಗೊಳ್ಳುತ್ತಾ ಹೊರಬರುತ್ತೇವೆ.

ಶ್ರೀ ಯೋಗಾನೃಸಿಂಹರಿಗೆ ಅಭಿಷೇಕ, ಶ್ರೀ ಚಂದನ-ಲೇಪನ, ಅರ್ಚನೆ ಮುಂತಾದ ಸೇವೆ ಉಂಟು.

ಮೇಲಿನ ಬಯಲು ಮಾಳಿಗೆಯಲ್ಲಿ ಟಿಪ್ಪೂಸುಲ್ತಾನ್ ಅರ್ಪಿಸಿದ ನಗಾರಿ, ಪರಕಾಲಮಠ ನೀಡಿದ ದೊಡ್ಡ ಘಂಟೆ, ಶ್ರೀ ನೃಸಿಂಹದೇವರ ದುಂಡನೆ ಕಿರೀಟವನ್ನೇ ಹೋಲುವ ದಿವ್ಯವಿಮಾನದಲ್ಲಿ ನಿಂತಿರುವ ಶ್ರೀನಿವಾಸ; ಇಲ್ಲಿನ ಪೌಳಿಯಿಂದ ಬಯಲು - ಕಣಿವೆಗಳ ದೂರದಿಗಂತ ದೃಶ್ಯ ಚಿರಸ್ಮರಣೀಯ. ಪ್ರಾಕಾರದ ಅಡಿಯಲ್ಲಿ 'ಬಿಲಸ್ವರ್ಗ' ಎಂಬ ಸುರಂಗ ಇದೆ. ಅದರ 'ಶ್ರೀ ಪಾದುಕಾಕೃಪೆ' ಒಂದು ವಿಶೇಷ.

ಮೇಲುಕೋಟೆಯಲ್ಲಿ ಭಗವಂತನಿಗೆ ನಡೆಯುವ ಎಲ್ಲ ಉತ್ಸವಗಳಲ್ಲೂ ಒಂದೊಂದು ವೈಶಿಷ್ಟ್ಯ ಉಂಟು. ಮುಕುಟಪ್ರಾಯ ಉತ್ಸವ ಶ್ರೀ ವೈರಮುಡಿ ಬ್ರಹ್ಮೋತ್ಸವ. ಈ ಎಲ್ಲ ಉತ್ಸವಗಳನ್ನೂ ಆನಂದಿಸುವ ನೇತಾರರು ಭಗವನ್ ರಾಮಾನುಜರು. ಆಚಾರ್ಯರ ದೂರದೃಷ್ಟಿ, ಶ್ರೀ ತಿರುನಾರಾಯಣನ ಸಂಕಲ್ಪ, ಭಕ್ತರ ಕೈಂಕರ್ಯ ಕಾರಣ. 'ಕೋಯಿಲ್ ಕಾಪ್ಪಾನ್' ಶ್ರೀ ರಾಮಾನುಜರ ಅನ್ವರ್ಥನಾಮ.

ಕೆಲ ಉತ್ಸವಗಳು :-- ೧) ಕಾರ್ತೀಕಮಾಸದಲ್ಲಿ ಅಷ್ಟತೀರ್ಥ ನವ ಮಹೋತ್ಸವ; ೨) ನಿತ್ಯ ಸುಪ್ರಭಾತ, ಸಹಸ್ರನಾಮ, ಶಾತ್ತುಮೊರೈಗಳು, ಸಂಜೆಯ 'ತಿರುವಂದಿಕ್ಕಾಪ್ಪ್' ಎಂಬ ದೀವಟಿಗೆ ಸಲಾಮು, ದೀಪಾರಾಧನೆ. ೩) ವರ್ಷಕ್ಕೆ ಸುಮಾರು ೩೨ ವಿಶೇಷೋತ್ಸವಗಳು ನಡೆಯುತ್ತವೆ. ಹಸ್ತ ನಕ್ಷತ್ರದಲ್ಲಿ ಹಗಲು ಹೊತ್ತು, ಏಕಾದಶಿಯಲ್ಲಿ ರಾತ್ರಿಹೊತ್ತು,

ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತೆ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು. ವಿವಿಧೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1. ಶ್ರೀ ವೇದನಾರಾಯಣಸ್ವಾಮಿ ಆಲಯ --ನಾಗುಲಾಪುರಂ.
2. ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ --ನಾರಾಯಣವನಂ.
3. ಶ್ರೀ ವೇಣುಗೋಪಾಲಸ್ವಾಮಿ ಆಲಯ --ಕಾರ್ವೇಟಿನಗರ.
4. ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ --ಅಪ್ಪಲಾಯಗುಂಟ.
5. ಶ್ರೀ ವೆಂಕಟೇಶ್ವರಸ್ವಾಮಿ ಆಲಯ --ಶ್ರೀನಿವಾಸಮಂಗಾಪುರ.
6. ಆಲಯಸಮುದಾಯ --ಹೃಷೀಕೇಶ.

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ.

**ತಿ. ತಿ. ದೇವಸ್ಥಾನಗಳು,**
**ತಿರುಪತಿ.**

ಶ್ರೀ ತಿರುನಾರಾಯಣಸ್ವಾಮಿ ಪಚ್ಚಕರ್ಪೂರ ತಿಲಕವನ್ನೂ ನಿರಾಜನ ಕಷಾಯನ್ನೂ ಧರಿಸಿ ಶ್ರೀನಿವಾಸನ ಅಲಂಕಾರ ಮಾಡಿಕೊಳ್ಳುತ್ತಾರೆ. ೪) ಮುಖ್ಯ ಉತ್ಸವ ವೈರಮುಡಿ ಬ್ರಹ್ಮೋತ್ಸವ. ಮೀನಮಾಸದ ಹಸ್ತ ನಕ್ಷತ್ರ (ಮಾರ್ಚ್, ಏಪ್ರಿಲ್) ದಲ್ಲಿ ಬರುತ್ತದೆ. ಪ್ರಹ್ಲಾದನ ಮಗ ವಿರೋಚನ ಕದ್ದು ಓಡಿದ ಮಹಾವಿಷ್ಣುವಿನ ಕಿರೀಟವೇ ಗರುಡ ಮರಳಿ ತಂದು ಶ್ರೀಕೃಷ್ಣನಿಗೆ ಅರ್ಪಿಸಿದ ಈ ಝಗಝಗಿಸುವ ಈ ದೊಡ್ಡ ವೈರಮುಡಿ. ಅದಕ್ಕೆ ಶೆಲ್ವಪಿಳ್ಳೈ ಸಕಲಾಭರಣ ಧರಿಸಿ, ಮಂದಸ್ಮಿತನಾಗಿ ಗರುಡನ ಕೈಗಳ ಮೇಲೆ ಪಾದ ಊರಿ, ಕುಳಿತು, ಉಭಯ ದೇವಿಯೊಡನೆ ದೊಡ್ಡ ಅರ್ಧ ವರ್ತುಲಾಕಾರ ಪ್ರಭೆಯೊಡನೆ ಭಕ್ತಜನ ಸಾಗರದ ಮೇಲೆ ತೇಲುತ್ತ ಬರುವ ರಾತ್ರಿಯ ದಿವ್ಯದೃಶ್ಯ ದೇವದುರ್ಲಭ! ಏಳನೆಯ ತಿರುನಾಳ್ ದಿವ್ಯರಥೋತ್ಸವ.

ಶ್ರೀ ಕಲ್ಯಾಣೀ ವಿಲಸದ್ವದು
ಗಿರೀಶ ಹರೇ ಮುರಾರೇ
ನಾರಾಯಣಾರ್ಥಿ ಕಲ್ಪತರೋ
ಸಂಪತ್ಕುಮಾರ ಭವತೇ
ನಿತ್ಯ ಶ್ರೀ ನಿ ತ್ಯಮಂಗಳ ಭೂಯಾತ್

೫) ವರ್ಷಕ್ಕೊಮ್ಮೆ ತಿರುನಾರಾಯಣಸ್ವಾಮಿಗೆ ಮಹಾಭಿಷೇಕ. ರಾತ್ರಿ ಶೆಲ್ವಪಿಳ್ಳೈಯನ್ನು ಉಭಯ ದೇವಿ ಸಹಿತ 'ಶೇರ್ತಿಸೇವೈ' - ತಿರುನಾರಾಯಣನ ಎದುರು ಬಿಜಯಮಾಡಿಸಿ ಅರ್ಚಿಸುತ್ತಾರೆ.

೬) ಕೋಡೈತಿರುನಾಳ್, ೭) ಮೇಷಮಾಸ ಆರ್ದ್ರಾ ನಕ್ಷತ್ರದಂದು ಶ್ರೀರಾಮಾನುಜಾಚಾರ್ಯರ ತಿರುನಕ್ಷತ್ರ ಉತ್ಸವ. ಸಮಾರೋಪದಂದು ಪಲ್ಲಕ್ಕಿಯಲ್ಲಿಅಲಂಕೃತ ಶ್ರೀಭಾಷ್ಯಕಾರರ ಉತ್ಸವ. ಎದು ಮುಂದೆ ಯತಿರಾಜರಿಗೆ ರಥೋತ್ಸವ.

ಇವಲ್ಲದೆ ಶ್ರೀ ನೃಸಿಂಹ ಜಯಂತಿ, ವಸಂತೋತ್ಸವ ಪಲ್ಲವೋತ್ಸವ (ಜೂನ್ - ಸಂಗೀತಸೇವೆ), ಡೋಲೋತ್ಸವ, ಅಕ್ಟೋಬರ್ ನವರಾತ್ರಿ, ಶ್ರೀ ದೇಶಿಕರ ತಿರುನಕ್ಷತ್ರ, ಮಾರ್ಗಳಿ ಧನುರ್ಮಾಸದ ಮೂವತ್ತು ದಿನಗಳೂ ತಿರುಪ್ಪಾವೈ, ಗದ್ಯತ್ರಯ ಪಾಶುರಪಠಣ. ಮಲೆ ಶ್ರೀ ನೃಸಿಂಹರಿಗೆ ವಿಶೇಷ ಪೂಜೆ. ಆಳ್ವಾರ್ ಪರಮಪದ ಉತ್ಸವ. ಮುಂದೆ ಸಂಕ್ರಾಂತಿ ಉತ್ಸವ, ಕೃತ್ತಿಕೋತ್ಸವ - ಹೀಗೆ ಶ್ರೀರಾಮಾನುಜತೆ ಭಾವೈಕ್ಯತೆಗೆ ಜತೆ.

ಮೈಸೂರಿನ ಚಿಕ್ಕದೇವರಾಯರು (ಕ್ರಿ.ಶ. ೧೬೭೪-೧೭೧೧) ರಚಿಸಿದ 'ಚಿಕ್ಕದೇವರಾಯ ಬಿನ್ನಪ' ಗದ್ಯಗ್ರಂಥ ಈ ಸ್ವಾಮಿಗೇ ಅರ್ಪಿತ. ಮುಮ್ಮಡಿ ಕೃಷ್ಣರಾಜ ಒಡೆಯರು (ಕ್ರಿ.ಶ. ೧೮೧೦-೧೮೬೮), ಗುಡಿಯ ಜೀರ್ಣೋದ್ಧಾರ ಮಾಡಿ, 'ಕೃಷ್ಣರಾಜ ಮುಡಿ' ಎಂಬ ನವರತ್ನ ಖಚಿತ ಕಿರೀಟ, ಪದಕ, ದಿವ್ಯಾಭರಣ ಸಮರ್ಪಿಸಿ ದ್ವಿತೀಯ ಬ್ರಹ್ಮೋತ್ಸವ ಏರ್ಪಡಿಸಿದರು. ಇಂದು ಸಂಸ್ಕೃತ-ಸಂಸ್ಕೃತಿ ಅಲ್ಲಿ ಬೆಳಗುತ್ತಿದೆ. ಊರಿನಲ್ಲಿ ಗೃಹವಸತಿ ರಿಪೇರಿ, ಒಳಚರಂಡಿ ವ್ಯವಸ್ಥೆ, ಕುಡಿವನೀರು, ಯಾತ್ರಿಕರ ವಸತಿ, ದೀಪ ವ್ಯವಸ್ಥೆ - ಹೀಗೆ ಹಲವು ಆವಶ್ಯಕ ಸೇವೆ ಆಗಬೇಕಾಗಿದೆ. ಹಾಗೆಯೇ ಭಗವನ್ ರಾಮಾನುಜರು ಬಿತ್ತಿ ಹರಡಿದ ಭಗವನ್ನಂಬಿಕೆ ಸದಾ ಜೀವನ ಮಾರ್ಗದರ್ಶನವಾದರೆ, ವಿಶ್ವಶಾಂತಿ.

'ಶ್ರೀ ರಾಮಾನುಜಾರ್ಯ ದಿವ್ಯಾಜ್ಞಾ
ವರ್ಧತಾಂ ಅಭಿವರ್ಧತಾಂ' ✦

ವೈರ ಮುಡಿಯದು ನಿನ್ನ ಶಿರದಲಿ
ಚಾರು ತರವಾಗಿಹುದ ಕಾಣಲು
ಬಾರಿ ಬಾರಿಗೆ ಜನರು
ಸೇರ್ವರು ಬೀದಿ ಬೀದಿಯಲಿ
ಯಾರ ಮನಸಿಗು ನೋವ ತಾರದೆ
ಯಾರ ಆಸೆಗು ಭಂಗ ತಾರದೆ
ಸಾರಿ ದರುಶನ ನೀಡಿ
ಸಲಹುವೆ ವರುಷ ವರುಷದಲಿ

ಮೇಲು ಕೋಟೆಯ ಚೆಲುವ ರಾಯನೆ
ಮೇಲು ಕೀಳುಗಳೆಣಿಸದಿರುವನೆ
ಕಾಲದಿಂದಲು ಪೂಜೆ
ಗೊಳ್ಳುತ ಮೆರೆದ ದೈವತವೆ
ಕಾಳ ರಾತ್ರಿಯ ಲೋಡುತಿರುವೆನು
ಬಾಳ ಹಾದಿಯ ಪರಿಯನರಿಯೆನು
ಹಾಲು ಸಕ್ಕರೆಯಂಥ
ದಾರಿಯ ತೋರಿ ಪೊರೆಯಯ್ಯ

# ಪ್ರಬಂಧಗಳಲ್ಲಿ ನಾಯಿಕಾಭಾವ

---ಎಂ. ಆರ್. ನರಸಿಂಹನ್.

ಜೀವಸತಿ ದೇವ ಪತಿ ಎಂಬುದೊಂದು ಭಾವ. ಅಥವಾ ಅದೇ ನಿಜ. ಎಲ್ಲ ಭಕ್ತರೂ ತಮ್ಮ ಕೃತಿಗಳಲ್ಲಿ ಈ ನಾಯಿಕಾಭಾವವನ್ನು ಅವಲಂಬಿಸಿ ಭಗವಂತನನ್ನು ಸೇರಲು ಹಾತೊರೆದವರೇ ಹೌದು. ತಮಿಳು ವೇದಗಳಾದ ದಿವ್ಯಪ್ರಬಂಧಗಳನ್ನು ಹಾಡಿದ ಹನ್ನೆರಡು ಮಂದಿ ಆಳ್ವಾರರುಗಳೂ ಈ ಸೂತ್ರದ ಒಳಗೆ ಬರುವಂತಹವರೇ. ಇಲ್ಲಿ ಭಕ್ತಿಯೇ ಉದ್ದಕ್ಕೂ ವಿಷಯವಾಗಿ ಹರಿದಿದೆ. ಭಗವಂತನಿಗೆ ವಾತ್ಸಲ್ಯದಿಂದ ಪಲ್ಲಾಂಡು ಹೇಳಿದ ಪೆರಿಯಾಳ್ವಾರರೂ, ಅವರ ಪುತ್ರಿ ರಂಗನಾಥನನ್ನೇ ವರಿಸಿದ ಗೋದಾದೇವಿಯೂ, ತಮ್ಮ ಪಾಶುರಗಳಲ್ಲಿ ನಾಯಿಕಾಭಾವವನ್ನು ಹೇಗೆ ವಿವರಿಸಿದ್ದಾರೆ ಎಂಬುದರ ಒಂದು ನೋಟ ಇಲ್ಲಿ ಪ್ರಸ್ತುತವಾಗಿದೆ.

ನಾವು ಪೆರಿಯಾಳ್ವಾರ್ ಮತ್ತು ಅವರ ಸಾಕು ಗಳಾದ ಆಂಡಾಳ್ ಅವರ ದಿವ್ಯಪ್ರಬಂಧಗಳಲ್ಲಿ ಕ್ತವಾಗಿರುವ ನಾಯಿಕಾಭಾವದ ರೂಪುರೇಖೆಗಳನ್ನು ಅರಿತು ಅವುಗಳ ಸೌಂದರ್ಯವನ್ನು ಆಸ್ವಾದಿಣ.

ಪೆರಿಯಾಳ್ವಾರ್ ಕೃತಿಗಳು ಎರಡು ತಿರುಪ್ಪಲ್ಲಾಂಡು ಮತ್ತು ಪೆರಿಯಾಳ್ವಾರ್ ತಿರುಮೊಳಿ. ತಿರುಪ್ಪಲ್ಲಾಂಡು ಪರಮಾತ್ಮನನ್ನು ಕುರಿತ ರಕ್ಷೋಘ್ನ ಸ್ತೋತ್ರ. ಅದರಲ್ಲಿ ನಾಯಿಕಾಭಾವದ ಪ್ರಸ್ತಾಪವಿಲ್ಲ. ಪೆರಿಯಾಳ್ವಾರ್ ತಿರುಮೊಳಿಯ ೪೬೧ ಪಾಶುರಗಳ ಪೈಕಿ ಕೇವಲ ೨೧ ಪಾಶುರಗಳಲ್ಲಿ ಈ ಭಾವ ಅಭಿವ್ಯಕ್ತಗೊಂಡಿದೆ. ತಿರುಮೊಳಿಯ ೩ನೇ ಶತಕದ ೮ನೇ ದಶಕದ ೧೧ ಪಾಶುರಗಳು ಮತ್ತು ೯ನೇ ದಶಕದ ೧೦ ಪಾಶುರಗಳು ಈ ಭಾವವನ್ನು ಎತ್ತಿ ಹಿಡಿಯುತ್ತವೆ. ಮುಂದಿನ ದಶಕದಲ್ಲಿ ಈ ಭಾವದ ಅಂಶವು ಕಂಡುಬಂದರೂ ಕೂಡ ಪರಮಾತ್ಮನ ರಾಮ, ಕೃಷ್ಣಾವತಾರಗಳ ದಿವ್ಯ ಲೀಲಾವೈಭವದ ಅಂಶಗಳೇ ಅದರಲ್ಲಿ ಓರ್ವಗೋಪಿಯ ಮಾತಿನಲ್ಲಿ ತುಂಬಿರುವುದರಿಂದ ಈ ವಿಚಾರ ಸರಣಿ ಬೇರೆಯಾಗಿ ನಿಲ್ಲುತ್ತದೆ. ಆದ್ದರಿಂದ ಅದರ ಅಧ್ಯಯನ ಇಲ್ಲಿ ಸೇರ್ಪಡೆಗೊಳಿಸಲು ಸಾಧ್ಯವಿಲ್ಲ.

ಪೆರಿಯಾಳ್ವಾರರ ಮೊದಲ ಹನ್ನೊಂದು ಪಾಶುರಗಳ ವಸ್ತುವೇ ಒಂದು ರೀತಿಯದು; ನಂತರದ ಹತ್ತು ಪಾಶುರಗಳ ಭಾವ ಮತ್ತೊಂದು ತೆರನಾದುದು. ಒಂದು ನಾಯಕಿಯ ವಿವಾಹ ಪೂರ್ವದ ಚಿತ್ರಚಿಂತನ; ಎರಡನೆಯದು ಆಕೆ ಗೃಹಿಣಿಯಾದುದರ ಬಗ್ಗೆ ಚಿಂತನ. ಎರಡು ವಿವರಗಳನ್ನೂ ನಮಗೆ ನೀಡುವವಳು ನಾಯಕಿಯ ತಾಯಿ. ಒಂದನೆಯ ಭಾಗದಲ್ಲಿ ನಾಯಕಿಯು ಇನ್ನೂ ಪ್ರೌಢಳಾಗದೆ, ಲೋಕವ್ಯವಹಾರದ ಲವಲೇಶವನ್ನು ಅರಿಯದೆ, ಬಾಲ್ಯಾವಸ್ಥೆಯಲ್ಲೇ ಇದ್ದರೂ ಕೂಡ ನೀಲಮೇಘಶ್ಯಾಮನಾದ ಕೃಷ್ಣನ ಬಲೆಗೆಬಿದ್ದು ಅವನೊಂದಿಗೆ ಸಂಸರ್ಗವೆಸಗಿರುವವಳೋ ಎಂಬ ಶಂಕೆ, ಭೀತಿ ತಾಯಿಯಲ್ಲಿ ಮೂಡಿ ಆಕೆ ತನ್ನ ಮನೋವೇದನೆಯನ್ನು ಮೆಟ್ಟಲು ಮೆಟ್ಟಲಾಗಿ ತೋಡಿಕೊಳ್ಳುವ ಚಿತ್ರದ ಜೋಡಣೆ ಚೇತೋಹಾರಿಯಾಗಿ ಮೂಡಿಬಂದಿದೆ. ಎರಡನೇ ಭಾಗದಲ್ಲಿ ಆಕೆಯೇನೋ ಕೃಷ್ಣನನ್ನು ಬಯಸಿ ಅವನ ಹಿಂದೆ ಹೊರಟುಹೋದಳು; ಅಲ್ಲಿ ಆಕೆಗೆ ಸ್ವಾಗತ ದೊರೆತು ಕೃಷ್ಣನ ತಂದೆ ತಾಯಿಯರು ಕೃಷ್ಣನಿಗೆ ಆಕೆಯನ್ನು ತಂದುಕೊಂಡರೋ ಇಲ್ಲವೋ, ಆಕೆಗೆ ಕುಲಗೌರವಕ್ಕೆ ತಕ್ಕ ಸ್ಥಾನಮಾನಗಳು ಅಲ್ಲಿ ದೊರೆತಿರುವುದೋ ಇಲ್ಲವೋ, ಆಕೆ ಸುಖದ ಸುಪ್ಪತ್ತಿಗೆಯಲ್ಲಿ ಸಮಯ ಕಳೆಯುತ್ತಿರುವಳೋ ಇಲ್ಲ ಕಷ್ಟದ ಕೂಪದಲ್ಲಿ ಬಿದ್ದು ಕೊಳೆಯುತ್ತಿರುವಳೋ ಎಂದು ಒಂದೂ ತಿಳಿಯದೆ ತಪಿಸುವ ತಾಯಿಯ ಕರುಳಿನ ಮನೋಜ್ಞ ಚಿತ್ರಣ ಮೂಡಿಬಂದಿದೆ. ಪೆರಿಯಾಳ್ವಾರ್ ನಿಜವಾಗಿ ಈ ಎರಡು ತೌಲನಿಕ ಚಿತ್ರಣ ನೀಡುವುದರಲ್ಲಿ ಸಫಲರಾಗಿದ್ದು ಹಿರಿಯ ಆಳ್ವಾರ್ ಆಗಿ ಮೆರೆದಿದ್ದಾರೆ ಎಂದರೆ ಅತಿಶಯೋಕ್ತಿ ಆಗಲಾರದು.

ಪರಮಾತ್ಮನನ್ನು ಕುರಿತು ಜೀವಾತ್ಮನು ನಡೆಸುವ ಸತತ ತಪಸ್ಸು, ಪರಮಾತ್ಮ ಗುರಿಸಾಧನೆಯ ವಿವರ, ಜೀವಾತ್ಮನ ಗಂತವ್ಯಸಾಧನೆ, ಇವುಗಳೆಲ್ಲದರ ಸಾಂಕೇತಿಕ ತತ್ತ್ವ ಇದರಲ್ಲಿ ಅಡಗಿದೆ ಎಂದರೆ ತಪ್ಪಾಗಲಾರದು.

ಪೆರಿಯಾಳ್ವಾರರ ಮೇಲೆ ತಿಳಿಸಿದ ತಿರುಮೊಳಿಯ ಪಾಶುರಗಳಲ್ಲಿ ನಾಯಕಿಗೆ ಇನ್ನೂ ತಿಳಿವು ಮೂಡಿಲ್ಲದ ವಯಸ್ಸು, ಇದನ್ನು ಇಂಗ್ಲೀಷ್ ಭಾಷೆಯಲ್ಲಿ ಅಡೋಲಸೆನ್ಸ್ ಎನ್ನುತ್ತಾರೆ. ನಾಯಕಿಗೆ ಇನ್ನೂ ಮಣ್ಣಿನಲ್ಲೆ ಆಟವಾಡುವ ಆಸಕ್ತಿ, ಸೀರೆಯಿರಲಿ ಉಟ್ಟಿರುವ ಬಟ್ಟೆಯನ್ನೇ ಸರಿಯಾಗಿ ಕೊಳಕು ಇಲ್ಲದಂತೆ ಇಟ್ಟುಕೊಳ್ಳಲರಿಯದ ಅಪ್ರಬುದ್ಧತೆ, ಕೈಗೆ ಸಿಕ್ಕಿದ ಆಟಿಕೆ ಅಥವಾ ಕೀಟವನ್ನು ಬಿಡದೆ ಆಟವಾಡಿಸುವ ಬಾಲ್ಯಚಾಪಲ್ಯ, ಹಲ್ಲುಗಳೇ ಮೊಳೆಯದ ಕಿರಿತನ (ಇಲ್ಲಿ ಹಾಲು ಹಲ್ಲು ಎಂದು ಅರ್ಥಮಾಡದೆ ದವಡೆಹಲ್ಲು ಎಂದು ತಿಳಿಯಬೇಕು. ದವಡೆಹಲ್ಲು ಬಂದಾಗ ವ್ಯಕ್ತಿ ಪ್ರಬುದ್ಧನೆನಿಸುತ್ತಾನೆ) ಜವಾಬ್ದಾರಿಯ ಮಾತುಗಳೇ ಬಾರದ ಅಪ್ರಬುದ್ಧತೆ ತಲೆ ಮುಡಿಯೋ ದಟ್ಟವಾಗಿಲ್ಲದ ವಯಸ್ಸು ಮೊಲೆಗಳು ಮೂಡದ ಬಾಲ್ಯ, ಇಂತಹ ಅಪ್ರಗಲ್ಭೆ ಎನಿಸಿಕೊಂಡವಳು ಗೋವಿಂದನ ಜಾಲದಲ್ಲಿ ಹೇಗೆ ಸಿಲುಕಿಕೊಂಡಳು ಎಂಬುವುದೇ ತಾಯಿಯ ಸಮಸ್ಯೆ. ದೊಡ್ಡ ಮಾತುಗಳನ್ನೇ ಆಡಲರಿಯದವಳು ಗೋವಿಂದನನ್ನು ಕುರಿತೇ ಮಾತನಾಡುವಳು, ಸದಾ ಚಿಂತಿಸುತ್ತಾ ಪರಾಙ್ಮುಖಳಾಗಿ ನಿಲ್ಲುವಳು, ರಂಗೋಲೆ ಇಡುವಾಗಲೂ ಆತನ ಪಂಚಾಯುಧಗಳನ್ನೇ ಚಿತ್ರಿಸುವಳು. ಪಾತ್ರೆಯಲ್ಲಿ ಬಡಿಸುವ ಪಂಚಭಕ್ಷ್ಯದ ರುಚಿಯನ್ನು ಪಾತ್ರೆಯೆಂತು ಅರಿತುಕೊಳ್ಳದೋ ಹಾಗಿರುವ ಕಿಶೋರಿಯಲ್ಲದ ಶಿಶುಸದೃಶಳೀಗ ಕೃಷ್ಣನನ್ನು ಅರಸುತ್ತಾ, ತುಳಸೀಮಾಲೆಯನ್ನು ಧರಿಸಿ ಅವನು ಓಡಾಡಿದ ಜಾಗವನ್ನು ಜಾಡುಹಿಡಿದು ಮರುಳು ಮನುಜಳಂತೆ ಓಡಾಡುತ್ತಿರುವಳಲ್ಲ ಎಂದು ತಾಯಿ ದೆರಗುವಡೆಯುತ್ತಾಳೆ. ಇದೆಲ್ಲಾ ಆಕೆ ಓಡಾಡುವ ಸಹವಾಸದೋಷವೋ; ಜೊತೆಗಾರ್ತಿಯರ ಏರ್ಪಾಡೋ, ಅವರು ಮಾಡಿರುವ ಸಂಚೋ, ಎಂದು ಶಂಕಿಸುತ್ತಾಳೆ. ಕೆಟ್ಟಕಣ್ಣುಗಳು ಕುದೃಷ್ಟಿ ಹಾಕಿ ಏನೇನು ಕಷ್ಟಗಳು ಏರ್ಪಡುವುದೋ, ಆಗದವರು ಕೆಡುಕುಮಾಡಿದರೆ ಹೇಗೋ ಎಂದು ಭೀತಳಾಗುತ್ತಾಳೆ. ತಾನೇನು ಆಕೆಗೆ ಕಡಿಮೆ ಮಾಡಿದ್ದೇನೆ, ನೆಲದ ಮೇಲೆ ನಡೆಯಲೂ ಬಿಡದೆ ಕಿವಿಗೆ, ಕೊರಳಿಗೆ, ಕಾಲಿಗೆ, ನಡುವಿಗೆ ಆಭರಣಗಳನ್ನು ಮಾಡಿಸಿ ಆನಂದಿಸಿದ್ದೇನೆ. ಅವಳಿಗಾದರೋ ಆ ಆಭರಣಗಳ ಅಂದವನ್ನು ಕಂಡು ಆನಂದಿಸುವ ವಯಸ್ಸೂ ಅನುಭವವೂ ಇನ್ನೂ ಬಂದಿಲ್ಲ, ಅದನ್ನು ಜೋಪಾನವಾಗಿ ನೋಡಿಕೊಳ್ಳುವ ಬುದ್ಧಿ ಕೂಡ ಬಂದಿಲ್ಲ; ಅವಳ ಬಾಲ್ಯದಿಂದ ಎನ್ನುವಂತೆ ವಯಸ್ಸಿಗನುಗುಣವಾದ ಸಮಾರಂಭಗಳನ್ನು ಸಂಭ್ರಮವಾಗಿ ನೆರವೇರಿಸಿದ್ದಾಯಿತು. ಅವಳಿಗೆ ಏನು ತಾನೇ ಕಡಿಮೆ ಮಾಡಿದ್ದೇನೆ. ಇಷ್ಟು ಸುಖದಿಂದ ಬೆಳೆದವಳು ಈಗ ತಾಯಿಯಾದ ತನ್ನನ್ನೇ ಅಲಕ್ಷಿಸಿ ಕೃಷ್ಣನ







ಹಿಂದೆಯೇ ಹೋಗುತ್ತಿರುವಳಲ್ಲ. ಆತನೇ ಸರ್ವಸ್ವವಾಗಿಬಿಟ್ಟನೇನು ಎಂದು ವ್ಯಥಿಸುವ ತಾಯಿಯ ದಾರುಣ ಚಿತ್ರ ಅತಿರಮ್ಯವಾಗಿ ವರ್ಣನೆಗೊಂಡಿದೆ ಪೆರಿಯಾಳ್ವಾರರ ಕಾವ್ಯಲೇಖನಿಯಲ್ಲಿ!

ಪದ್ಮಸುಶೋಭಿತವಾದ ಸರಸ್ಸಿನ ಮೇಲೆ ಮಂಜು ಪತನವಾಗಿ ಪದ್ಮರೇಣುಗಳು ಚದುರಿ ಅಂದಗೆಟ್ಟಂತಾಯ್ತು ತನ್ನ ಮಗಳ ಪರಿಸ್ಥಿತಿ. ಜ್ಞಾನವೇ ಇಲ್ಲದ ರೂಪಹೀನ ಗೊಲ್ಲಕರುವನ್ನು ಎತ್ತಿಕೊಂಡು ಎತ್ತ ಒಯ್ದನೋ ಯಾರು ಬಲ್ಲರು; ಮದುವೆಯ ಪೂರ್ವ ವಿಧಿಗಳನ್ನು ತಾನೇನು ನಡೆಸಿಕೊಡುವುದಿಲ್ಲವೆಂದೆನೆ! ಈಗೇನು ಮಂಗಳವಾದ್ಯಗಳು ಮೊಳಗುತ್ತಿರುವುದೋ? ಪ್ರಪಂಚದವರೆಲ್ಲಾ ಪ್ರಶಂಸಿಸುವಂತೆ ತಾನು ಮಗಳನ್ನು ಬೆಳೆಸಿದ್ದುದಕ್ಕೆ ತಕ್ಕ ಫಲವೇ ಪ್ರಾಪ್ತವಾಯಿತು. ತನ್ನ ಸುಪುತ್ರಿಯನ್ನು ನಂದಗೋಪನ ಸುಪುತ್ರನೆಂಬುವವನು ಹೀಗೆಯೇ ಕೊಂಡೊಯ್ಯುವುದು. ಗೌರವವೇ ? ನಂದಗೋಪನಿಗೆ ತನ್ನ ಮಗಳು ಒಪ್ಪಿಗೆಯಾಗಿರುವಳೊ? ಯಶೋದೆಯು ಆದರಿಸಿರುವಳೋ? ನಂದಗೋಪನು ತನ್ನ ಮಗಳ ಸೊಬಗನ್ನು ಅಡಿಯಿಂದ ಮುಡಿಯವರೆಗೂ ಅವಲೋಕಿಸಿ ಆನಂದಿತನಾಗಿ ಆಕೆಯ ಮೂರ್ಧ್ನಿಘ್ರಾಣಮಾಡಿ, ಆಕೆಯನ್ನು ಅಗಲಿದ ತಾಯಿಯ ಪರಿಸ್ಥಿತಿಗಾಗಿ ಮರುಗಿರುವನೋ ಎಂತೋ ತಿಳಿಯದಾಗಿದೆ. ಆಕೆಯನ್ನು ಸೊಸೆಯನ್ನಾಗಿ ಸ್ವೀಕರಿಸಿರುವನೋ? ದೇಡರು, ಗೊಲ್ಲರು ಮುಂತಾದವರ ವಿಧಿಯಂತೆ ತಾನೇ ಧಾರೆ ಎರೆದು ಕೊಡುತ್ತಿರಲಿಲ್ಲವೆ? ಈಕೆಯನ್ನು ಆ ಜನ ಗೌರವವಾಗಿ ನಡೆಸಿಕೊಳ್ಳುತ್ತಾರೆಯೆ? ಇಲ್ಲ ಇತರ ಗೋಪಸ್ತ್ರೀಯರಂತೆ ಅಂತಃಪುರಕ್ಕೆ ಕಾವಲುಕಾಯಲು ನೇಮಿಸಿಬಿಡುವರೋ ಹೇಗೋ ತಿಳಿಯದಲ್ಲ? ನಂದಗೋಪಕುಮಾರನು ತನ್ನ ವಂಶಕ್ಕೆ ಅನುಗುಣವಾಗಿ ಒಂದು ಒಳ್ಳೆಯ ಕೆಲಸವನ್ನೂ ಮಾಡದೆ ಈಗ ತನ್ನ ಮಗಳು ಎರಡು ವಂಶಕ್ಕೂ ಅನುಗುಣವಾಗಿ ಬಾಳಬೇಕಲ್ಲವೆ? ಬಿಕ್ಕಿ ಬಿಕ್ಕಿ ಅಳುತ್ತಾ ಮೊಸರು ಕಡೆದು ಹಗ್ಗವೆಳೆದು ಕೈಸೋತು ಸೊರಗುತ್ತಿರುವಳೋ ಏನೋ? ಬೆಳಗಾಗೆದ್ದು ಅವಳಿಗೆಲ್ಲಿ ಮೊಸರು ಕಡೆಯುವ ರೂಢಿ. ಇತ್ಯಾದಿ ಇತ್ಯಾದಿಯಾಗಿ ತಾಯಿ ಜೀವ ತನ್ನ ಕರುಳಿನ ಕುಡಿಯ ಬಗ್ಗೆ ತಲ್ಲಣಿಸುವ ಚಿತ್ರವಂತೂ ಮನೋಜ್ಞವೇ ಸರಿ.

ಪೆರಿಯಾಳ್ವಾರರ ಭಾವುಕಚಿಂತನ, ಅನುಪಮ ಸಾಹಿತ್ಯಶಕ್ತಿ, ಅಸಮಾನ್ಯವೈವಭಕ್ತಿ, ಭಗವಂತನ ಮೇಲೆ ಅವರಿಗಿರುವ ಅನುಪಮ ರಕ್ತಿ, ಪ್ರಪತ್ತಿ ಮಾರ್ಗದಲ್ಲಿ ಅವರಿಗಿರುವ ಅವಿಸ್ಮರಣೀಯ ಪ್ರತಿಪತ್ತಿ- ಇವುಗಳೆಲ್ಲವರ ವಿಶ್ವರೂಪದರ್ಶನ ನಮಗೆ ಇಲ್ಲಿ ದೊರೆಯುತ್ತದೆ. ಭಕ್ತನನ್ನು ಭಾವುಕನನ್ನಾಗಿ ಮಾಡಬಲ್ಲ ರಸಪ್ರಸಂಗ ಇದು ಎಂದರೆ ತಪ್ಪಾಗಲಾರದು. ತಿರುಮೊಳಿಯ ಮೊದಲ ಭಾಗದಲ್ಲಿ ಮಗನನ್ನಾಗಿ ಭಾವಿಸಿದ ಯಶೋದೆಯ ಹಲವಾರು ಘಟ್ಟಗಳನ್ನು ನಾವು ಅನುಭವಿಸಿ ಈಗ ಇದ್ದಕ್ಕಿದ್ದಂತೆ ಪ್ರೌಢಕೃಷ್ಣನ ಪ್ರಣಯ ಪ್ರಸಂಗವನ್ನು ಈರೀತಿ ಅನುಭವಿಸುವ ಘಟ್ಟವನ್ನು ಪೆರಿಯಾಳ್ವಾರ್ ಇಲ್ಲಿ ದಯಪಾಲಿಸಿದ್ದಾರೆ. ಪುರುಷಾರ್ಥಗಳಾದ ಧರ್ಮ ಅರ್ಥ ಕಾಮ ಮೋಕ್ಷ ಈ ನಾಲ್ಕು ವಿಧಗಳಿಂದಲೂ ಪರಮಾತ್ಮನನ್ನು ಸಾಧಿಸುವ ಲಕ್ಷ್ಯ ಭಕ್ತನದು ಎಂಬುದನ್ನು ಸಿದ್ಧಪಡಿಸಿದ್ದಾರೆ. ಕಾಮ ಎಂದರೆ ಅದೇನು ತುಚ್ಛ ವಿಭಾಗವಲ್ಲ ಪರಮಾತ್ಮಸಾಧನೆ ಆ ಮಾರ್ಗದಿಂದಲೂ ಲಭ್ಯ ಎಂದು ಸಾಧಿಸಿದ್ದಾರೆ. "ಪರಮಾತ್ಮನು ಸಾಕ್ಷಾನ್ಮನ್ಮಥ ಮನ್ಮಥಃ" ಎನಿಸಲ್ಪಡತಕ್ಕ ಕಾಮನೇ ಆಗಿದ್ದಾನೆ. ಅವನ ಆರಾಧನೆಯೇ ಕಾಮತಪಸ್ಸೆ ಎಂಬುದಾಗಿ ಆಳ್ವಾರ್ ಆಚಾರ್ಯರುಗಳಿಂದ ವ್ಯಾಖ್ಯಾನಗೊಂಡಿದೆ - ಈ ಅಶ್ಲೀಲವೆಂದು ಪರಿಭಾವಿಸಲ್ಪಟ್ಟಿರುವ ಕಾಮವಿಚಾರ. ಈ ತೃತೀಯ ಪುರುಷಾರ್ಥವನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ. 'ಚಿಟ್ಟಿನ್ಬಂ' 'ಪೇರಿನ್ಬಂ' ಎಂಬುವೇ ಈ ವಿಭಾಗಗಳು. 'ಕಿರಿದಾದ ಕಾಮ' 'ಹಿರಿದಾದ ಕಾಮ' ಎಂದು ಅರ್ಥ. ಮೊದಲನೆಯದು ಮಾನುಷೀಯವಾದ ಕಾಮ ಎರಡನೆಯದು ದೈವಿಕವಾದ ಕಾಮ. ಮೊದಲನೆಯದು ಲೋಕಧರ್ಮದಂತೆ ಮನುಷ್ಯನ ಜೀವನದಲ್ಲಿನ ಆಚರಣೆ. ಮಾನುಷಿಕ ಕಾಮದಲ್ಲಿ ಧರ್ಮವಿದೆ. ಗೃಹಸ್ಥಾಶ್ರಮದಲ್ಲಿ ಅದೊಂದು ಅಂಗ. ಸೃಷ್ಟಿಯ ಧರ್ಮದ ಮರ್ಮ ಅಡಗಿದೆ. ಸಂಸಾರಕ್ಕೆ ಬೇಕಾದ ಪರಿಕರ ಈ ಅಂಗ. ಇದು ಕೀಳಲ್ಲ. ಇದೊಂದು ತಪಸ್ಸೆ ಎಂದು ಉಪನಿಷತ್ತು ಸಾರುತ್ತದೆ. ಇದೊಂದು ಯಜ್ಞಕ್ಕೆ ಸಮ ಎಂದೆಲ್ಲಾ ಉಪನಿಷತ್‌ಗಳಲ್ಲಿ ನಿರೂಪಣೆ ಇದೆ. ಇಲ್ಲಿಯೂ ಯಜ್ಞಫಲ ದೈವಕ್ಕೆ ಸಮರ್ಪಣೆ ಎಂದೇ ಭಾವನೆ. 'ಪೇರಿನ್ಬಂ' ಎಂದಾಗ ಪರಮಾತ್ಮನೊರ್ವನೇ ಪುರುಷ ಜೀವರೆಲ್ಲ ಸ್ತ್ರೀಯರು ಅವನ ಸಂಸರ್ಗವೇ ಜೀವದ ಗುರಿ. ಅದನ್ನು ಸಾಧಿಸುವುದೇ ಜೀವನದ ಉದ್ದೇಶ್ಯ ಎಂದು ವ್ಯಾಖ್ಯಾನ ಮಾಡಿದ್ದಾರೆ ಹಿರಿಯರು. ಹೀಗೆ ಅಶ್ಲೀಲ, ಶೃಂಗಾರ ಭಾವನೆಗಳಲ್ಲೂ ಅಸದೃಶವಾದ ಅನುಭಾವವನ್ನು ಶ್ರೀ ವೈಷ್ಣವ ಸಾಹಿತ್ಯದಲ್ಲಿ ನಾವು ವಿಸ್ತಾರವಾಗಿಯೂ ಆದರ ಪೂರ್ವಕವಾಗಿಯೂ ಕಾಣಬಹುದಾಗಿವೆ.

ಇನ್ನು ಆಂಡಾಳ್ ಸಾಹಿತ್ಯವನ್ನು ಅವಲೋಕಿಸಿ ಅದರಲ್ಲಿನ ನಾಯಿಕಾಭಾವವನ್ನು ಆಸ್ವಾದಿಸಿ ಆನಂದಿಸೋಣ. ಇದರಲ್ಲಿ ಒಂದು ವಿಶೇಷ. ಇಲ್ಲಿಯವರೆಗೂ, ಇನ್ನು ಮುಂದೂ ಆಳ್ವಾರುಗಳ ಸಾಹಿತ್ಯ

ದಲ್ಲಿ ನಾವು ಕಾಣುವುದು ನಾಯಕಿಯಾಗಿ ಆಳ್ವಾರ್ ನಾಯಿಕಾಭಾವವನ್ನು ಪಾಶುರಗಳಲ್ಲಿ ವ್ಯಕ್ತಪಡಿಸಿದರೂ ಕೂಡ ಒಂದು ರೀತಿ ಅಸ್ವಾಪದೇಶಿಯವಾಗಿಯೇ ನಾವು ಕಾಣುತ್ತೇವೆ. ಆದರೆ ಆಂಡಾಳ್ ಪ್ರಬಂಧದಲ್ಲಿ ಇದು ಸ್ವಾಪದೇಶೀಯವಾಗಿಯೇ ನಮಗೆ ದರ್ಶನ ನೀಡುತ್ತದೆ. ಏತಕ್ಕೆಂದರೆ ಆಂಡಾಳ್ ಸ್ವತಃ ಸ್ತ್ರೀ. ಜೀವಾತ್ಮಗಳ ಪ್ರತಿನಿಧಿಯಾಗಿ ಮೆರೆಯುತ್ತಾಳೆ. ಅವಳು ಸ್ವ ಅನುಭವವನ್ನೇ ವಿವರಿಸುತ್ತಾಳೆ. ಅವಳು ಸ್ತ್ರೀಯಾದ್ದರಿಂದ ಅವಳ ಮನೋಭಾವವು ಸಂಪೂರ್ಣವಾಗಿಯೂ, ಸ್ಪಷ್ಟವಾಗಿಯೂ, ಮರೆಮಾಡಲ್ಪಡದೆಯೂ ಇಲ್ಲಿ ವ್ಯಕ್ತವಾಗುತ್ತದೆ. ಒರ್ವ ಸ್ತ್ರೀಯ ಕಾಮ ವ್ಯಾಪಾರಭಾವನೆಗಳು, ಅಂತರಂಗಿಕ ವಿಚಾರ ಇವುಗಳ ಸಹಜ ನಿರೂಪಣೆ ಆಳ್ವಾರುಗಳಿಗೆ ಸಹಜವಾಗಿಯೇ ಕಷ್ಟವೆನಿಸಲ್ಪಡುತ್ತದೆ. ಅದನ್ನು ಅಭಿವ್ಯಕ್ತಪಡಿಸಲು ಅವರು ಅಧ್ಯಯನ ಕೈಕೊಳ್ಳಬೇಕು. ಸ್ತ್ರೀಯ ಅಂತರಂಗ ಪ್ರಕ್ರಿಯೆಗಳನ್ನು ಅವಳ ಮನೋವ್ಯಾಪಾರಗಳನ್ನು ಅವರು ಅರಿತು ಸುರಿತು ನಂತರ ಅಭಿವ್ಯಕ್ತ ಮಾಡಬೇಕು. ಆದರೆ ಈ ಕ್ರಿಯೆ ಆಂಡಾಳ್‌ಗೆ ಮೀನಿಗೆ ಈಜಿನಂತೆ ಸುಲಭ ಸಾಮಾನ್ಯವಾಗಿದೆ. ನಿರಾಯಾಸವಾಗಿ ಮನೋಭೀಷ್ಟವನ್ನು ಹೊರಗೆ ತರಬಲ್ಲ ಸಾಮರ್ಥ್ಯ ಆಂಡಾಳ್ ಸಾಹಿತ್ಯಕ್ಕೇ ಇದೆ ಎಂಬುವುದೇ ಇದರ ಹೆಗ್ಗಳಿಕೆ. ಈ ದೃಷ್ಟಿಯಿಂದ ಆಕೆಯ ನೇರವಾದ ದಿಟ್ಟವಾದ ಮಾತುಗಳನ್ನು ಸ್ವಾಪದೇಶೀಯ ಎಂದು ನಾನು ಕರೆದಿರುವುದು. ಇದನ್ನು ಸ್ವಾನುಭವ ಎಂದರೂ ಸರಿಯೆ ! ಬೇರೆ ಆಳ್ವಾರ್‌ಗಳಿಗೆ ಈ ಭಾವ ಸಂಪಾದನೆ ಕಷ್ಟಸಾಧ್ಯ ಅಥವಾ ಅಸಾಧ್ಯ

ಆಂಡಾಳ್ ದಿವ್ಯಪ್ರಬಂಧಗಳು ಎರಡು ಒಂದು ತಿರುಪ್ಪಾವೈ ಮತ್ತೊಂದು ನಾಚ್ಚಿಯಾರ್ ತಿರುಮೊಳಿ. ತಿರುಪ್ಪಾವೈ ವ್ರತಾಚರಣೆಯ ನಿರೂಪಣೆ. ಕೃಷ್ಣರೂಪಿ ನಾರಾಯಣನಿಂದ ಒಲವನ್ನು ಗಳಿಸಿಕೊಳ್ಳುವುದು. ಪ್ರೇಯಸಿಯು ಪುರುಷನಿಂದ ಕೊಳ್ಳುವ ಒಲವಲ್ಲ. ಭಕ್ತರು ಪ್ರಪಂಚದ ಕ್ಷೇಮ ಸುಭಿಕ್ಷಕ್ಕಾಗಿ, ಕಾಲಕಾಲದ ಪರ್ಜನ್ಯವರ್ಷಕ್ಕಾಗಿ, ಬೆಳೆ ಹೊಳೆಯ ನಲಿವಿಗಾಗಿ ವ್ರತಗೈದು ಪರಮಾತ್ಮನ ಅನುಗ್ರಹ ಸಂಪಾದನೆಗಾಗಿ ಕೈಕೊಳ್ಳುವ ವ್ರತದ ವಿವರಣೆ, ಪರಿಣಾಮದ ವೈಖರಿ ವಿಶೇಷ. ಇದರಲ್ಲಿ ಕಾಮಭಾವನೆ ಲೇಶವೂ ಇಲ್ಲ. ಅಂಡಾಳನ್ನು ನಾಯಕಿ ಎನ್ನಬಹುದು. ಅವಳು ಸಖಿಯರನ್ನೆಬ್ಬಿಸಿ ಕೃಷ್ಣನನ್ನು ಭೇಟಿಯಾಗಲೂ ಬಹುದು. ಆದರೆ ಉದ್ದೇಶ ಕೃಷ್ಣನಿಂದ ಲೋಕೋದ್ಧಾರದ ಅನುಗ್ರಹ ಸಂಪಾದಿಸುವುದು ಈ ಪ್ರಬಂಧದ ಗುರಿ ಅಷ್ಟೆ. ಇದರಲ್ಲಿ ಪ್ರಿಯೆಯು ಪ್ರಿಯನ ಸಮಾಗಮವನ್ನು ಆಶಿಸುವ ವಸ್ತುವಿಲ್ಲವಾಗಿ ನಾಯಿಕಾಭಾವದ ವಸ್ತುವಿನ ಪ್ರಸ್ತಾಪವನ್ನೇ ಕಾಣಲಾರೆವು. ಹೀಗಾಗಿ ಈ ದಿವ್ಯಪ್ರಬಂಧವು ನಮ್ಮ ಪ್ರಸ್ತುತ ವಿಷಯದ ವ್ಯಾಪ್ತಿಗೆ ಒಳಪಡುವುದಿಲ್ಲವೆಂದು ನನ್ನ ಅಭಿಪ್ರಾಯ. ಇಲ್ಲಿಯ ಭಕ್ತಿ ಮಧುರ ಭಕ್ತಿಯಲ್ಲಿ ಪ್ರಪನ್ನಭಕ್ತಿ, ಉಪಪನ್ನನ ಭಕ್ತಿ ಅಷ್ಟೆ!

ನಾಚ್ಚಿಯಾರ್ ತಿರುಮೊಳಿ ಆದರೋ ನಾಯಿಕಾಭಾವದಿಂದ ಪರಿಪೂರ್ಣವಾಗಿರುವ ೧೪೩ ಪಾಶುರಗಳ ದಿವ್ಯಪ್ರಬಂಧ. ಇದರಲ್ಲಿ ಆಂಡಾಳ್ ತನ್ನ ಆತ್ಮನಿವೇದನೆ ಮಾಡಿಕೊಳ್ಳುವ ವಸ್ತು ವಿಸ್ತಾರ ಮಜಲು ಮಜಲಾಗಿ ವಿವರಣೆಗೊಂಡಿದೆ. ವಿರಹವೆನ್ನುವ ವಸ್ತು ತನ್ನ ವಿವಿಧ ಸ್ತರಗಳಲ್ಲಿ ವಿಜೃಂಭಿಸಿದೆ. ವೇದನೆಯೆನ್ನುವ ಭಾವ ತನ್ನ ಹಲವುರೂಪಗಳಿಂದ ಹೊಮ್ಮಿ ಕೋಲಾಹಲವನ್ನೇ ಎಬ್ಬಿಸಿದೆ. ಕಾಮದ ಕಿಚ್ಚು ಮನುಷ್ಯನನ್ನು ಹುಚ್ಚೆಬ್ಬಿಸುವ ವೈಭವವನ್ನು ಇಲ್ಲಿ ಕಾಣಬಹುದಾಗಿದೆ. "ಮನಸಿಜನ ಮಾಯೆ ಕೊಂದು ಕೂಗದೆ ನರನಂ!" ಎಂಬ ಕನ್ನಡದ ಕವಿ ಚಕ್ರವರ್ತಿಯ ಮಾತು ನೆನಪಿಗೆ ಬರುತ್ತದೆ.

ಆಂಡಾಳ್ ಅವಳ ವಿರಹದ ಕಾವಿನ ಚಿತ್ರವೇಧಕ ನಿರೂಪಣೆ ನಮ್ಮನ್ನು 'ಅಯ್ಯೋಪಾಪ' ಎಂಬ ಅನುಕಂಪಕ್ಕೆ ಒಳಪಡಿಸುತ್ತದೆ. ಪರಮಾತ್ಮನು ಏತಕ್ಕೆ ಇಷ್ಟು ನಿರ್ಘೃಣನಾಗಿದ್ದಾನೆ ಎಂದು ಅವನ ಮೇಲೆ ಕೋಪವೇ ಏರ್ಪಡುತ್ತದೆ. ಪಾಪ ಹೆಣ್ಣು ಎಷ್ಟೊಂದು ತತ್ತರಿಸುತ್ತದೆ ಎಂದು ಕರುಣೆ, ಮರುಕ ನಮ್ಮಲ್ಲಿ ಏರ್ಪಡುತ್ತದೆ. ಇದೇ ನಿಜವಾದ ಸಾಹಿತ್ಯದ ಪರಿಣಾಮ. ಆಂಡಾಳ್ ಪ್ರಬಂಧ ಇದಕ್ಕೆ ಉದಾಹರಣೆಯಾಗಿ ಮೆರೆಯುತ್ತದೆ. ಅಲಂಕಾರ, ರಸ ಇವುಗಳು ಎಷ್ಟು ಉನ್ನತ ಮಟ್ಟಕ್ಕೇರಿದರೆ ಅಷ್ಟು ಅದರ ಪರಿಣಾಮ ಉನ್ನತವಾಗುತ್ತದೆ. ಆಗಲೇ ಸಾಹಿತ್ಯಕ್ಕೆ ಸಾರ್ಥಕ್ಯ ಉಂಟಾಗುತ್ತದೆ. ಆಂಡಾಳ್ ನಾಚ್ಚಿಯಾರ್ ತಿರುಮೊಳಿ ಈ ದೃಷ್ಟಿಯಿಂದ ಅಪೂರ್ವ ಸಾಹಿತ್ಯರತ್ನವೆನಿಸುತ್ತದೆ.

ಆಂಡಾಳ್ ನಾಚ್ಚಿಯಾರ್ ತಿರುಮೊಳಿ ಹದಿನಾಲ್ಕು ದಶಕಗಳಾಗಿ ವಿಂಗಡಿಸಲ್ಪಟ್ಟಿದೆ. ಪ್ರತಿ ದಶಕದಲ್ಲಿ ಹತ್ತು ಪಾಶುರಗಳಿದ್ದು ೪-೫-೬ ದಶಕಗಳಲ್ಲಿ ಹನ್ನೊಂದು ಪಾಶುರಗಳು ಇವೆ. ಆದ್ದರಿಂದಲೇ ೧೪೩ ಪಾಶುರಗಳಾದದ್ದು.

ಮೊದಲನೇ ದಶಕದಲ್ಲಿ ಆಂಡಾಳ್ ಪರಮಾತ್ಮನನ್ನು ಯಾರ ಮೂಲಕ ಹೊಂದುವುದು ಎಂದು ಯೋಚಿಸಿ ಕಾಮದೇವನೇ ಇದಕ್ಕೆ ಸರಿಯಾದ ವ್ಯಕ್ತಿ ಎಂಬುದಾಗಿ ಸಂಕಲ್ಪಿಸಿ ಕಾಮದೇವನನ್ನು ಈ ಕೆಲಸ ಮಾಡಿಸಲು ಮೊರೆ ಹೋಗುತ್ತಾಳೆ. ವಿಧವಿಧವಾಗಿ ಅವನನ್ನು ಪ್ರಾರ್ಥಿಸುತ್ತಾಳೆ. ಕಾಮನೇ ಕಾಮಕ್ಕೆ



ಅಧಿದೈವವಾದ್ದರಿಂದ ಅವನ ಮುಂದೆ ತನ್ನ ಕಾಮಭಾವನೆಗಳನ್ನು ನಿಸ್ಸಂಕೋಚವಾಗಿ ತೋಡಿಕೊಳ್ಳುವ ಆಂಡಾಳ್ ಸಾಹಿತ್ಯದ ವಸ್ತು ವಿನ್ಯಾಸ ನಿಜವಾಗಿಯೂ ಅಪೂರ್ವವಾದದ್ದೂ ಪದವೈಖರಿ, ವಾಗ್ವೈಭವ ನಿಜಕ್ಕೂ ಮನನಾರ್ಹವಾದದ್ದೂ, ಮೆಲುಕು ಹಾಕುವಂತಹುದ್ದು, ಅನುಸಂಧೇಯವಾದದ್ದು.

"ಊನಿಡೈಯಾಳಿ ಶಂಗುತ್ತಮರ್ಕೆ ಎನು ಉನ್ನಿತ್ತೆ ಮಿಂದ ಎನ್ ತಡ್ಡೈ ಮುಲೈಗಳ್ ಮಾನಿಡವರ್ಕು ಎನ್ರು ಪೇಚ್ಚು ಪಡಿಲ್ ವಾಳಿಹಿಲ್ಲೇನ್ ಕಂಡಾಯ್ ಮನ್ಮಥನೇ" ಎಂದು ಮನ್ಮಥನಲ್ಲಿ ಆಪ್ತವಾಗಿ ಬೇಡಿಕೊಳ್ಳುತ್ತಾಳೆ. ಇಲ್ಲಿ ಮನ್ಮಥ ಅವಳ ಪಾಲಿಗೆ ಕಿರಿಯ ಸೋದರನಷ್ಟು ಆಪ್ತನಾಗಿದ್ದಾನೆ. ದೇವನಿಗೆಂದೇ ತೀರ್ಮಾನಿಸಲ್ಪಟ್ಟಿರುವ ತನ್ನ ಸ್ತನಸಂಪತ್ತು ಬೇರೆ ಸಾಮಾನ್ಯಮಾನವನಿಗೆ ಎಂದು ತೀರ್ಮಾನಿಸಿದರೆ ನಾನು ನಿಜವಾಗಿಯೂ ಬಾಳುವುದಿಲ್ಲ" ಎಂದು ಇದರ ಅರ್ಥ. ಪೆರಿಯಾಳ್ವಾರ್ ಅವರು ಪ್ರಾಪ್ತ ವಯಸ್ಕಳಾದ ಆಂಡಾಳ್ ಅನ್ನು ಸೂಕ್ತವರನೊಬ್ಬನಜೊತೆ ವಿವಾಹ ಮಾಡಲು ಏರ್ಪಡಿಸಿದ್ದರೆಂದು ತೋರುತ್ತದೆ. ಗತ್ಯಂತರವಿಲ್ಲದೆ ಆಂಡಾಳ್ ಮನ್ಮಥನಲ್ಲಿ ಈರೀತಿ ನಿವೇದಿಸಿಕೊಳ್ಳುತ್ತಾಳೆ ಪಾಪ!

ಇಲ್ಲಿ ಕಾಮಶೃಂಗಾರ ಎದ್ದು ಕಂಡರೂ ಕೂಡ ಅವಳ ವಿರಹದ ವ್ಯಾಕುಲದ ನೋವಿನಲ್ಲಿ ಅದರ

ಅಶ್ಲೀಲತೆ ಮರೆಯುತ್ತದೆ. ಅವಳ ನಿವೇದನೆ ಆಪ್ಯಾಯಕವಾಗುತ್ತದೆ. ಜಯದೇವನ ಶೃಂಗಾರ ಅತಿಯಾದರೆ ಆಂಡಾಳ್ ಶೃಂಗಾರ ನಿರೂಪಣೆ ಇತಿ ಮಿತಿಯಾಗಿ ಹೀಗೆ ಮೆರೆಯುತ್ತದೆ.

ಇದೇ ರೀತಿ "ತೇರಮುನ್ನಳಂದವನ್ ತಿರಿವಿಕ್ಕಿರಮನ್ ತಿರುಕ್ಕೈಗಳಾಲ್ ತೀಂಡುಮ್ ವಣ್ಣಮ್ ಶಾಯುದ್ಯೆವಯಿರುಂ ಎನ್ ತಡಮುಲ್ಲೆಯುಂ ತರಣಿಯಿಲ್ ತಲ್ಯೆಪ್ಪುಗಳ್ ತರಕ್ಕಿತ್ತಿಯೇ?" ಎಂದು ಶೋಕಿಸುತ್ತಾಳೆ ಆಂಡಾಳ್. ಅವಳ ಮೈಮೊಲೆಗಳನ್ನು ತ್ರಿವಿಕ್ರಮನು ತನ್ನ ಕೈಗಳಿಂದ ಸಮಾಧಾನಗೊಳಿಸದೇಕಂತೆ! "ಪೇಶುವದೊನ್ನುನ್ನು ಇಂಗೆಂಬೆರುಮಾನ್ ಪೆಣ್ಮೈಯ್ಯೆ ತಲ್ಯೆಯುದ್ಯೆತಾಕ್ಕುಂ ವಣ್ಣಂ ಕೇಶವನಂಬಿಯ್ಯೆಕ್ಕಾಲ್ ಪಿಡಿಪ್ಪಾಳ್ ಎನ್ನುಂ ಇಪ್ಪೇರೆನಕ್ಕು ಅರುಳ್‌ಕಂಡಾಯ್" ಎಂದರೆ "ಹೇಳುವುದೊಂದುಂಟು ಪರಮಾತ್ಮನು ತನ್ನ ಸ್ತ್ರೀ ತತ್ವವನ್ನು ತಲೆಯಿಂದ ಸೋಕಿ ನನ್ನ ವೇದನೆಯನ್ನು ಪರಿಹರಿಸಲಿ ಇದಕ್ಕಾಗಿ ಮನ್ಮಥನೇ ನಾನು ಆತನ ಕಾಲನ್ನು ಹಿಡಿಯುವೆನೆಂದು ಬಿನ್ನವಿಸು" ಎನ್ನುತ್ತಾಳೆ. ಪಯಿದಿನ್ರಿ ಪಾರ್ಕಡಲ್ ವಣ್ಣನುಕ್ಕೇ ಪಣಿ ಶೆಯ್ದು ವಾಳಪ್ಪೆರಾವಿಡಿಲ್ ನಾನ್ ಅಳುದಳುದು ಅಲಮರ್ನ್ದು ಅಮ್ಮಾವಳಂಗ "ದೇವನಿಗೇ ಊಳಿಗ ವೆಸಗಿ ನಾನು ಬಾಳಬೇಕು ಇಲ್ಲದಿದ್ದರೆ ಬಾಳಲಾರೆ" ಎಂದು ನೋಯುತ್ತಾಳೆ. ತಿರುಪ್ಪಾವೈನ 'ಉನಕ್ಕೇ ನಾಮ್ ಆಳ್ ಶೈವೋಂ' ಎಂಬ ಭಾವನೆ ನೆನಪಿಗೆ ಬರುತ್ತದೆ. ಆದರೆ ಅಲ್ಲಿ ದೈವ ಕೈಂಕರ್ಯ ಇಲ್ಲಿ ದೈವಕ್ಕೆ ನಾಯಕಿಯಾಗಿ ಎಸಗುವ ಸೇವೆ‌ಅಷ್ಟೇ ವ್ಯತ್ಯಾಸ.

ಎರಡನೇ ದಶಕದಲ್ಲಿ ಆಂಡಾಳ್ ತಾನು ಬರೆದ ರಂಗವಲ್ಲಿಯನ್ನು ಕೆಡಿಸೆಂದು ನಾರಾಯಣನನ್ನು ಬೇಡುತ್ತಾಳೆ ಮೂರನೆಯ ದಶಕದಲ್ಲಿ ಕೆರೆಯಲ್ಲಿ ಸ್ನಾನಮಾಡುವಾಗ ಆತ ಸೀರೆಯನ್ನು ಕದ್ದೊಯ್ದು. ನೀರಿನಲ್ಲಿ ನಿಂತ ಈಕೆ ಆತನನ್ನು ಸೀರೆಗಾಗಿ ಬೇಡುವ ವಿವರಗಳು ಹೃದ್ಯವಾಗಿದೆ. ನಾಲ್ಕನೇ ದಶಕದಲ್ಲಿ ತನ್ನಿಂದ ದೂರನಾಗಿರುವ ಪರಮಾತ್ಮನೊಡನೆ ತಾನು ಸೇರುವೆನೇ ಎಂದು ಭವಿಷ್ಯವನ್ನು ಅರಿಯಲು ಕೂಡ್ಲ್ ಚಿತ್ರಬಿಡಿಸಿ "ಕೂಡಲಿ, ಕೂಡಲಿ" ಎಂದು ಕಾತರಿಸುತ್ತಾಳೆ. ಐದನೇ ಹತ್ತು ಪಾಶುರಗಳಲ್ಲಿ ಕೋಗಿಲೆಯನ್ನು ನಾರಾಯಣನನ್ನು ಕರೆದು ತಾರೆಂದು ಬೇಡಿಕೊಳ್ಳುವ ವಿಚಾರ ಮನೋಜ್ಞವಾಗಿದೆ. ಇಲ್ಲಿ ಆಂಡಾಳ್ ಉಪಯೋಗಿಸಿರುವ ಅಲಂಕಾರಿಕ ವರ್ಣನೆಗಳು ಆಕರ್ಷಕವಾಗಿವೆ. ಒಂದೆರಡನ್ನು ನಾವು ಗಮನಿಸಲೇಬೇಕು. "ಪೊಂಗಿಯ ಪಾರ್ಕಡಲ್ ಪಳ್ಳಿಕೊಳ್ವಾನ್ಯೆ ಪುಣರ್ವದೋರ್ ಆಶೆಯಿನಾಲ್ ಎನ್ ಕೊಂಗ್ಯೆ ತಿಳಿರ್ನ್ದು ಕುಮ್ಮಿತ್ತು ಕುದುಹಲಿತ್ತು ಆವಿಯ್ಯೆ ಆಹುಲಂ ಶೆಯ್ಯುಂ" ಎನ್ನುತ್ತಾಳೆ. "ಅಲೆಗಳಿಂದ ಉಕ್ಕುವ ಹಾಲು ಸಮುದ್ರದಲ್ಲಿ ಮಲಗಿದವನನ್ನು ಸೇರಿಕೊಳ್ಳುವ ಆಸೆಯಿಂದ ನನ್ನ ಸ್ತನಗಳು ಬಿರಿದು ಹೋಗುತ್ತಾ ಕುತೂಹಲಿಸಿ ಜೀವವನ್ನು ತಲ್ಲಣಗೊಳಿಸುತ್ತಿದೆ" ಎನ್ನುವ ಅರ್ಥ ಈ ಭಾವ ಸ್ತ್ರೀಯೇ ವರ್ಣಿಸಬೇಕೇ ವಿನಹ ಪುರುಷನಿಗೆ ಈ ಸಹಜ ಭಾವ ಖಂಡಿತ ಪ್ರದರ್ಶನ ಮಾಡಲು ಸಾಧ್ಯವೇ ಇಲ್ಲ ಈ ದೃಷ್ಟಿಯಿಂದ. ಆಂಡಾಳ್ ಸಾಹಿತ್ಯಕ್ಕೆ ಮೇಲುಗೈ ಏರ್ಪಡುತ್ತದೆ. 'ಆಳಿಯುಂ, ಶಂಗುಂ, ಒಣ್‌ತಂಡುಂ, ತಂಗಿಯ ಕೈಯ್ಯವನ್ಯೆ ವರಕ್ಕೂವಿಲ್ ನೀ ಶಾಲತ್ತರುಮಮ್ ಪೆರುದಿ' -

'ಶಂಖ ಚಕ್ರಗಳನ್ನು ಹಿಡಿದ ಕೈನವನನ್ನು ಬರಹೇಳಿದರೆ ಪುಣ್ಯಕಟ್ಟಿಕೊಳ್ಳುತ್ತೀಯೆ.' 'ಶಂಗೋಡು ಶಕ್ಕರತ್ತಾನ್ ವರಕ್ಕೂವುದಲ್, ಪೊನ್‌ವಳ್ಳಿಕ್ಕೊಂಡು ತರುದಲ್ ಇಂಗುಳ್ಳ ಕಾವಿನಿಲ್ ವಾಳಿಕ್ಕರುದಿಲ್ ಇರಣ್ಡುತೊನ್ರೇಲ್ ತಿಣ್ಣಮ್ ವೇಂಡುಂ' - ಶಂಖ ಚಕ್ರಗಳನ್ನು ಕೊಂಡವನನ್ನು ಕರೆತರುವುದು. ಪೊನ್ನಬಳಿಯನ್ನು ಕೊಂಡು ತರುವುದು, ಇಲ್ಲಿನ ಕಾವಿನಿಂದ ಬಾಳಿಸಲು ಬಿಡುವುದು ಇವೆರಡರಲ್ಲಿ ಒಂದು ನಡೆಯಬೇಕು, ಎನ್ನುತ್ತಾಳೆ.

ಕೃಶಿಸಿದ ತೋಳು ಕೈಗಳಿಂದ ಬಳೆಯು ಕಳಚಿ ಬಿದ್ದುಹೋಗಿದೆ. ಈಗ ಬಳೆಯನ್ನು ಮತ್ತೆ ತರ ಬೇಕು ಎಂದರೆ ಕೃಶಿಸಿದ ಕೈ ಸರಿಯಾಗಿ ಮೊದಲಿ ನಂತೆ ದಪ್ಪನಾಗಬೇಕಲ್ಲವೆ. ಅದಕ್ಕೆ ಆ ದೇವನು ಬಂದಾಗ ವಿರಹ ಪರಿಹಾರವಾಗಿ ಮೊದಲಿನಂತೆ ಆಗುತ್ತಾಳೆ. ಆಗ ಬಳೆಯನ್ನು ತಂದುಕೊಟ್ಟಂತೆ! ಇದು ಅಲಂಕಾರ ಶಾಸ್ತ್ರದಲ್ಲಿ-- ಇಕ್ಕಾವಿಲಿರುನ್ದಿ ರುನ್ದು ಎನ್ನೈತದೈತ್ತಾದೆ ನೀಯುಂ ಕುಯಿಲೇ - ಎನ್ನು ತ್ತಾಳೆ. "ನೀನೂ ನನ್ನನ್ನು ಈ ರೀತಿ ಇರುವಾಗ ಗದ ರಿಸಬೇಡ, ಅಪಹಾಸ್ಯ ಮಾಡಬೇಡ ಕೋಗಿಲೆಯೆ" ಎಂದು ಅರ್ಥ. ಇವೆಲ್ಲಾ ರಮ್ಯವಾದ ಸಾಹಿತ್ಯದ ಉಪಯೋಗಗಳು. ಆಂಡಾಳ್ ಇವನ್ನು ಸಾರ್ಥಕ ವಾಗಿ ಉಪಯೋಗಪಡಿಸಿಕೊಂಡಿದ್ದಾಳೆ.

ಆರನೇ ದಶಕದಲ್ಲಿ ಆಂಡಾಳ್ ನಾರಾಯಣ ನೊಂದಿಗೆ ವಿವಾಹವಾದಂತೆ ಕನಸ್ಸು ಕಂಡು ಆ ವೈಭವವನ್ನು ಸಖಿಗೆ ವಿವರಿಸಿ ತಣಿಯುತ್ತಾಳೆ. ಇದೊಂದು ಸುಂದರ ಕಥಾಭಾಗ. ಶ್ರೀ ವೈಷ್ಣವನು ಆದರದಿಂದ ಅನುಸಂಧಾನಿಸುತ್ತಾನೆ. ಶ್ರೀವೈಷ್ಣವರ ಮದುವೆಯ ವಿಧಿಯ ವಿಧಾನಗಳು ಇಲ್ಲಿ ವಿವರಿಸ ಲ್ಪಟ್ಟಿವೆ. ಇದನ್ನು ಅನುಸಂಧಾನಿಸಿಯೇ ಅನುಭವಿಸ ಬೇಕು. ಮುಂದಿನದಶಕದಲ್ಲಿ ಪರಮಾತ್ಮನ ಕೈಯ್ಯಿನ ಶಂಖದ ಭಾಗ್ಯವನ್ನು ಹೊಗಳುತ್ತಾಳೆ. ತನಗಿಂತ ಅದು ಎಷ್ಟೊಂದು ಭಾಗ್ಯಶಾಲಿ ಯಾವಾಗಲೂ ಅವನ ಬಾಯಿಯ ಸ್ಪರ್ಶವನ್ನು ಹೊಂದಿರುತ್ತದೆ. ಅವನ ಬಾಯಿಯ ಸುವಾಸನೆಯನ್ನು ಆಸ್ವಾದಿಸು ತ್ತದೆ. ಅವನ ಬಾಯಿಯ ಅಮೃತ ರಸದ ಸವಿ ಅದಕ್ಕೆ ದೊರೆಯುತ್ತದೆ. ಇತರ ಹೆಣ್ಣುಗಳು ಅಸೂಯೆ ಪಡುವಷ್ಟು ಅದರ ಭಾಗ್ಯ. 'ಪೆಣ್‌ಪಡೆಯಾರ್ ಉನ್ಮೇಲ್ ಪೆರುಂ ಪೊಶಲ್ ಶಾತ್ತು ಹಿನ್ಹಾರ್ ದೇರೆ ಹೆಂಗಸರು ನಿನ್ನ ಮೇಲೆ ದೂಷಣೆಯನ್ನು ಮಾಡು ತ್ತಾರೆ. ಎನ್ನುತ್ತಾಳೆ ಆಂಡಾಳ್. ಹದಿನಾರು ಸಾವಿರ ದೇವಿಯರು ಸವಿದಿರುವ ಮಧುವನ್ನು ಕೊಂಡಂ ತಹ ಮಾಧವನ ಬಾಯಿಯ ಅಮೃತ ನಿನಗೆ ದೊರ ಕಿತೆ? ಎಂದು ಪ್ರಶಂಸೆ ಮಾಡುತ್ತಾಳೆ. ನಿಜವಾ ಗಿಯೂ ಕಲ್ಪನಾಭಾವ ಪರಾಕಾಷ್ಠತೆಗೆ ಸೇರಿದೆಯ ಲ್ಲವೆ. ಅಂತಹ ಭಾಗ್ಯತನಗೆ ಇಲ್ಲವಲ್ಲ ಎಂದು ಹಲು ಬುತ್ತಾಳೆ.

ನಂತರದ ದಶಕದಲ್ಲಿ ವೇಂಗಡದ ಮೇಲೆ ಸಾಗುವ ಮೇಘಗಳೊಂದಿಗೆ ತನ್ನ ಅಳಲನ್ನು ತೋಡಿಕೊಂಡು, ವೇಂಗಡದ ಕಾಳಮೇಘನಿಗೆ ಸಂದೇಶ ಕಳುಹಿಸುತ್ತಾಳೆ. ಈ ಮೇಘಸಂ ದೇಶ ಸೊಗಸಾಗಿ ಮೂಡಿಬಂದಿದೆ. ಕಣ್ಣೀರ್ಹಳ್ ಮುಲ್ಲೈಕ್ಕುವಟ್ಟಿಲ್ ತುಳಿಶೋರ ಶೋರ್ವೇನೆ? ಪೆಣ್ಣೀರ್ಮೈ ಈಡಳಿಕ್ಕುಂ ಇದು ತಮಕ್ಕೋರ್ ಪೆರುಮೆಯೇ?" ಎಂದು ಪ್ರಶ್ನಿಸುವ ಎದೆಗಾರಿಕೆ ನಿಜಕ್ಕೂ ಬೆರಗು ಬಡಿಯುತ್ತಿದೆ. ಅವಳ ಕಣ್ಣೀರುಕ ಣಗಳು ಮೊಲೆಯ ತುದಿಯ ಮೇಲೆ ಬಿದ್ದು ಘಾಸಿ ಪಡಿಸುತ್ತದೆಯಂತೆ ಹೆಣ್ಣುತನವನ್ನು ಹೀಗೆ ಅಪ ಮಾನ ಪಡಿಸುತ್ತಿದ್ದೀಯಲ್ಲ ನಿನಗೆ ತಕ್ಕುದೇ ಎನ್ನು ತ್ತಾಳೆ ಆಂಡಾಳ್ "ಎನ್ನಾಹತ್ತಿಳಂ ಕೊಂಗೈ ವಿರುಂ ಬಿತ್ತಾಮ್ ನಾಳ್ ತೋಳುಂ" --ಎಳೆಯದಾದ ಅವಳ ಸ್ತನಗಳು ಹಂಬಲಿಕೆಯಿಂದ ದಿವಸಗಳನ್ನು ಕಳೆಯುತ್ತಿವೆಯಂತೆ! ಉಲಂಗುಂಡ ವಿಲಂಗನಿ ಪೋಲ್ ಉಳ್‌ಮೆಲಿಯ ಪುಹುಂದು ಆಗಿರುವ ಳಂತೆ ಆಕೆ ಪಾಪ ಕೀಟವೊಂದು ಅಥವಾ ಪಕ್ಷಿ ಯೊಂದು ಬೇಲದ ಹಣ್ಣಿನ ಮೇಲೆ ಕುಳಿತರೆ ಸಾಕು ಒಳಗಿನ ತಿರುಳೆಲ್ಲ ಮಾಯವಾಗುವುದಂತೆ! ಆರೀತಿ ಇವಳ ಒಳಗನ್ನೆಲ್ಲಾ ಆ ಪರಮಾತ್ಮನ ಮೇಲಿನಿಂ ದಲೇ ಸೆಳೆದುಕೊಂಡು ಹೀರಿಹಿಪ್ಪೆಮಾಡಿದ್ದಾನೆ ಸೊಗಸಾದ ಉಪಮೆ. ಪಳವಿಲ್ಲೈಪೋಯ್ ವಿಳು ವೇನೇ ಎನ್ನುತ್ತಾಳೆ ಒಂದು ತೊಟ್ಟುನೀರು ಬಿದ್ದರೂ ಹಣ್ಣಾದ ಎಲೆ ಕೆಳಗೆ ಉದುರಿಬಿಡುವ ಪರಿಸ್ಥಿತಿ ತನ್ನ ದಾಗಿದೆ. ಅಷ್ಟು ಕಾಮದ ಆವೇಗದಿಂದ ಬೆಂದು ಬಸ ವಳಿದಿದ್ದಾಳೆ ಅಂಡಾಳ್. "ಓರ್‌ಪೆಣ್ ಕೊಡಿಯೈ ವದೈಶೈದಾನ್ ಎನ್ನುಂಶೊಲ್ ವೈಹತ್ತಾರ್ ಮದಿ ಯಾರೇ" ಹೀಗೆ ಇದ್ದರೆ ತಾನು ಸತ್ತುಹೋದರೆ ಒಂದು ಸ್ತ್ರೀಲತೆಯನ್ನು ವಧೆಮಾಡಿದನು ಎನ್ನುವ ಅಪನಿಂದೆ ಬಂದೇಬರುತ್ತೆ. ಹಾಗೆಂದು ಪ್ರಪಂಚ ದವರು ನಿಂದಿಸುತ್ತಾರೆ ದೇವರನ್ನು. ಇಲ್ಲಿ ಅವಳ ವಿರಹದ ಬಾಧೆ ತುತ್ತ ತುದಿಗೆ ಏರುತ್ತದೆ. ತಿರು ಮಾಲಿರುಂಶೋಲೈನ ಪ್ರತಿ ಹೂವು, ಲತೆ, ಕೀಟ, ಬಂಡು ಎಲ್ಲವನ್ನೂ ಆ ದೇವನೊಂದಿಗೆ ಸಂಸರ್ಗ ವೇರ್ಪಡಿಸೆಂದು ಬೇಡುತ್ತಾಳೆ. ತಾನು ಆ ದೇವನಿಗೆ ಕ್ಷೀರಾನ್ನವನ್ನು ಸಮರ್ಪಿಸುತ್ತೇನೆ. ಸಮಾಗಮ ಏರ್ಪ ಡಬೇಕು ಎಂದು ಕೇಳುತ್ತಾಳೆ ತನ್ನ ಅಭೀಷ್ಟವನ್ನು ನೆರವೇರಿಸಿದರೆ ಒಂದಕ್ಕೆ ನೂರಾಗಿ ಕೈಂಕರ್ಯ ವೆಸ ಗುತ್ತೇನೆನ್ನುತ್ತಾಳೆ. ಇದೊಂದುರೀತಿ ವಿರಹ ಉನ್ಮ ತ್ತತೆಗೆ ತಿರುಗುತ್ತದೆ. ಪಾಪ! ಅಲ್ಲಿನ ಹಕ್ಕಿ ಪಕ್ಕಿ ಗಳು ಪರಮಾತ್ಮನನ್ನು ಹಾಡಿದರೆ ಇವಳಿಗೆ ಸಹಿಸಿ ಕೊಳ್ಳಲು ಆಗುವುದಿಲ್ಲವಂತೆ. ಮಳೆಯು ಬಿದ್ದರೆ ಒಳಗೆ ಮೇಣವನ್ನು ಕರಗಿಸಿಬಿಟ್ಟಂತೆ ಘಾಸಿ ಆಗು ತ್ತದೆಯಂತೆ! ಹೂಗಳನ್ನೆಲ್ಲಾ ಬೇಡುತ್ತಾಳೆ ಲತೆಗ ಳೊಡನೆ ಲತೆಯಾಗಿ ಇದ್ದೂ ಅವನ ಶಂಖಧ್ವನಿ ಶಾರ್ಙ್ಗಧ್ವನಿ ಆಲಿಸುತ್ತೇನೆ ಎನ್ನುತ್ತಾಳೆ.

ಹೀಗೆಯೇ ಕೊರಗಿ ಕೊನೆಗೆ ಹುಚ್ಚಿಯಾಗಿ ಬಿಡು ತ್ತಾಳೆ ಆಂಡಾಳ್. ಆ ಕೃಷ್ಣ ನಿಂತು ಓಡಾಡಿದ ಗೋಕುಲ, ಮಥುರೆ, ಬೃಂದಾವನ, ಯಮುನೆ,



ಗೋವರ್ಧನ ಮುಂತಾದ ಜಾಗಗಳಿಗಾದರೂ ಕರೆದು ಒಯ್ಯಿರಿ ಎಂದು ಬೇಡುತ್ತಾಳೆ. ಅವುಗಳ ಸಾನ್ನಿಧ್ಯದಿಂದಲಾದರೂ ಸಮಾಧಾನ ಉಂಟಾಗು ವುದೋ ಎಂದು ಪ್ರಯತ್ನಿಸುತ್ತಾಳೆ. ಕೃಷ್ಣನು ಉಟ್ಟ ಪೀತಾಂಬರವನ್ನು ಮೈಮೇಲೆ ಬೀಸಿರಿ, ಅವನು ಧರಿಸಿದ ತುಳಸೀಮಾಲೆಯನ್ನು ಮೇಲೆ ಎಸೆಯಿರಿ. ಅವನ ವನಮಾಲೆಯನ್ನು ಎದೆಗೆ ಸೋಕಿಸಿರಿ ಅವನ ಬಾಯಿಯನೀರನ್ನು ಮೈಮೇಲೆ ಚುಮು ಕಿಸಿರಿ. ಅವನ ಕೊಳಲಿನಿಂದ ಹನಿಸುವ ನೀರನ್ನು ಮೈಗೆ ತಡವಿರಿ. ಅವನು ನಡೆದ ದಾರಿಯ ಹುಡಿಮ ಣ್ಣನ್ನು ಮೈಗೆ ಲೇಪಿಸಿರಿ. ಅವನು ಹಿಡಿದ ಕೋಲನ್ನು ಎದೆಗೂ ಮೈಗೂ ಅಮುಕಿ ಕಟ್ಟಿರಿ. ಅವನನ್ನು ಕರೆ ತನ್ನಿ, ಅವನ ದರ್ಶನದಿಂದ ಬಿರಿದ ಸ್ತನಗಳಿಗೆ ನೆಮ್ಮದಿ ಉಂಟಾಗುತ್ತದೆ ಎಂದು ಹುಚ್ಚುಹುಚ್ಚಾಗಿ ಹಲುಬುತ್ತಾಳೆ - ಇಲ್ಲದಿದ್ದರೆ ಉಸಿರು ನಿಲ್ಲುತ್ತದೆ ಖಂಡಿತ! ಖಂಡಿತ!

ಕೊನೆಗೂ ಬೃಂದಾವನದಲ್ಲಿ ಆಕೆಗೆ ಕೃಷ್ಣದರ್ಶ ನವಾಗುತ್ತದೆ. ಈ ಭಾಗವನ್ನು ಸ್ವಾರಸ್ಯವಾಗಿ ಆಂಡಾಳ್ ಹಾಡಿದ್ದಾಳೆ. ಹಾಡಿ ತನ್ನ ಪ್ರಬಂಧಕ್ಕೆ ಮಂಗಳ ಹಾಡಿದ್ದಾಳೆ ತನ್ನನ್ನು ಮೋಸಮಾಡಿದ ವನು, ಅಂತತುವನು ಇಂತತುವನು ಹೋಗಿದ್ದನ್ನು ಕಂಡಿರಾ ಎಂಬುದಾಗಿ ಪಾಶುರಗಳ ಮೊದಲೆರಡು

ಓದಿರಿ. ಓದಿಸಿರಿ.

# ಸಪ್ತಗಿರಿ

ತಿರುಮಲೆ -- ತಿರುಪತಿ ದೇವಸ್ಥಾನಗಳ ಧಾರ್ಮಿಕ ಮಾಸಪತ್ರಿಕೆ ಸಪ್ತಗಿರಿ.

ತೆಲುಗು ತಮಿಳು ಕನ್ನಡ ಹಿಂದಿ ಆಂಗ್ಲ ಭಾಷೆಗಳಲ್ಲಿ ಬೇರೆ ಬೇರೆಯಾಗಿ ಪ್ರಕಟವಾಗುವ ಪತ್ರಿಕೆ.

ಆಧ್ಯಾತ್ಮಿಕ, ಸಾಂಸ್ಕೃತಿಕ, ಧಾರ್ಮಿಕ ವಿಷಯಗಳೊಂದಿಗೆ ವಿಶೇಷಗಳೊಂದಿಗೆ ಪ್ರಕಟವಾಗುವ ಪತ್ರಿಕೆ.

ಸಪ್ತಗಿರಿ ಚಂದಾದಾರರಾಗ ಬಯಸುವವರು ಈ ಕೆಳಗಿನ ಸೂಚನೆಗಳನ್ನು ಗಮನಿಸಬೇಕೆಂದು ಪ್ರಾರ್ಥನೆ.

* ಸಪ್ತಗಿರಿಯ ವಾರ್ಷಿಕ ಚಂದಾ ಇಪ್ಪತ್ನಾಲ್ಕು ರೂಪಾಯಿಗಳು ಮಾತ್ರ. ಎಷ್ಟು ವರ್ಷದ ಚಂದಾ ಹಣವನ್ನಾದರೂ ತುಂಬಬಹುದು. (ಆಜೀವ ಸದಸ್ಯತ್ವವಿಲ್ಲ)
* ತಮ್ಮ ಚಂದಾ ಹಣವನ್ನು ಸಂಪಾದಕರು, ಸಪ್ತಗಿರಿ, ತಿ.ತಿ.ದೇ. ತಿರುಪತಿ ಇವರ ಹೆಸರಿಗೆ ಎಂ.ಓ./ಡಿ.ಡಿ./ಪಿ.ಓ. ರೂಪದಲ್ಲಿ ಕಳುಹಿಸಿ (ಚೆಕ್‌ಗಳನ್ನು ಅಂಗೀಕರಿಸಲಾಗದು).
* ತಮಗೆ ಯಾವ ಭಾಷೆಯ ಸಪ್ತಗಿರಿ ಬೇಕೆಂಬುದನ್ನು ಸ್ಪಷ್ಟವಾಗಿ ಬರೆಯಿರಿ.
* ತಮ್ಮ ಪೂರ್ಣ ವಿಳಾಸವನ್ನು ಬಿಡಿಬಿಡಿಯಾದ ಅಕ್ಷರಗಳಲ್ಲಿ ಸ್ಪಷ್ಟವಾಗಿ ಬರೆಯಿರಿ. (ಎಂ. ಓ. ಕೂಪನ್ನಿನ ವಿಷಯ ಬರೆಯುವ ಸ್ಥಳದಲ್ಲಿ)
* ಚಂದಾ ಹಣ ತಲುಪಿದ ಮಾರನೆಯ ತಿಂಗಳಿನಿಂದ ಸಪ್ತಗಿರಿಯನ್ನು ಕಳುಹಿಸಲಾಗುವುದು.
* ಚಂದಾ ಹಣವನ್ನು ಕಳುಹಿಸಿದ 30 ದಿನಗಳಲ್ಲಿ ಸಪ್ತಗಿರಿ ತಮಗೆ ಬಾರದಿದ್ದಲ್ಲಿ ತಮ್ಮ ಎಂ.ಓ./ಡಿ.ಡಿ. ಕ್ರಮಸಂಖ್ಯೆ ದಿನಾಂಕ ಮೊದಲಾದ ವಿವರಗಳೊಂದಿಗೆ ಪೂರ್ಣವಿಳಾಸವನ್ನು ನೀಡಿ ಕಾಗದ ಬರೆಯಿರಿ.

ಈ ಮೊದಲೇ ಚಂದಾದಾರರಾದವರಿಗೆ ಸೂಚನೆಗಳು :.

* ಹೊಸ ಚಂದಾನಂಬರುಗಳನ್ನು ನೀಡಲಾಗಿದೆ. ದಯವಿಟ್ಟು ಗಮನಿಸಿ.
* ತಮ್ಮ ಚಂದಾ ಮೊಬಲಗು ಮುಗಿಯುವ ಒಂದು ತಿಂಗಳ ಮೊದಲೇ ಪುನಃ ಚಂದಾಹಣವನ್ನು ಇತರ ಕಾರಣಗಳಿಗಾಗಿ ಬರೆಯುವಾಗ ದಯವಿಟ್ಟು ತಮ್ಮ ಹೊಸ ಸದಸ್ಯತ್ವ ಸಂಖ್ಯೆಯನ್ನು ತಪ್ಪದೇ ತಮ್ಮ ವಿಳಾಸದೊಡನೆ ನಮೂದಿಸಿ ಬರೆಯಿರಿ.

ಸಂಪಾದಕರು :
ಸಪ್ತಗಿರಿ
ತಿ.ತಿ.ದೇ., ತಿರುಪತಿ.

ಕೊಂಡು ಓದಿರಿ. ಕೊಂಡು ಓದಿಸಿರಿ.



ಸಾಲಿನಲ್ಲಿ ಪ್ರಶ್ನಿಸಿ ಹೌದು ಅಂತಹ ವೈಭವೋಪೇತನಾದ ಕೃಷ್ಣನು ಹೋಗಿದ್ದ ಬೃಂದಾವನವನ್ನು ಕಂಡೆವು ಎಂದು ಉತ್ತರ ಪಡೆಯುತ್ತಾಳೆ. ಪಾಶುರ ಉತ್ತರಾರ್ಧದ ಎರಡು ಸಾಲುಗಳಲ್ಲಿ ಹೀಗೆ ಹತ್ತು ಪಾಶುರಗಳಲ್ಲಿ ಈ ಪ್ರಶ್ನೋತ್ತರ ಮುಂದುವರೆದಿದೆ. ಇಂಗ್ಲೀಷ್ ನಾಟಕಗಳಲ್ಲಿ ಒಂದು ಕಾಲಕ್ಕೆ ಕಂಡುಬರುತ್ತಿದ್ದ ಮೇಳ ಅರೆಮೇಳಗಳಂತೆ ಈ ಸಾಹಿತ್ಯದ ಜೋಡಣೆಯನ್ನು ನಾವು ಕಾಣುತ್ತೇವೆ. ಇದು ಆಂಡಾಳ್‌ನ ವ್ಯಕ್ತಿತ್ವವೇ ಎರಡಾಗಿ ಭಾಗವಾಗಿ ಒಂದು ಭಾಗ ಪ್ರಶ್ನೆ ಮಾಡಿ ಮತ್ತೊಂದು ಭಾಗ ಉತ್ತರ ಪಡೆಯುತ್ತದೆ ಎಂಬುದಾಗಿಯೂ ನಾವು ಭಾವಿಸಬಹುದಾಗದೆ. ಸೊಗಸಾದ ಈ ಸಂವಿಧಾನದಿಂದ ನಾಚ್ಚಿಯಾರ್ ತಿರುಮೊಳಿ ಮಂಗಳಾಂತ್ಯವನ್ನು ಹೊಂದಿರುವುದು ನಮ್ಮಗಳ ಭಾಗ್ಯ ವಿಶೇಷ. ಇಲ್ಲಿ ಆಂಡಾಳ್ ಮಾತ್ರ ಶ್ರೀಕೃಷ್ಣ ಸಾಕ್ಷಾತ್ಕಾರ ಮಾಡದೆ ನಮ್ಮಗಳಿಗೂ ಆ ಮಹಾಮಹಿಮನ ಸಾಕ್ಷಾತ್ಕಾರ ಮಾಡಿಸಿದ್ದಾಳೆ ಎಂದರೆ ಅತಿಶಯೋಕ್ತಿ ಅಲ್ಲ. ಆಂಡಾಳ್ ಪರಮಾತ್ಮನನ್ನು ಎಲ್ಲಿಯೂ ದೂರಿಲ್ಲ. ಗೌರವಸ್ಥ ಮನೆತನದ ಹೆಣ್ಣಿನಂತೆ ನಡೆದುಕೊಂಡಿದ್ದಾಳೆ. ಮಡಲನ್ನು ಕೂಡ ಅಂತಿಮ ಅಸ್ತ್ರವನ್ನಾಗಿ ಉಪಯೋಗಿಸಿಲ್ಲದೇ ಇರುವುದು ನಿಜಕ್ಕೂ ಮೆಚ್ಚತಕ್ಕ ವಿಷಯ.

ಇವಳ ಭಾವಲಹರಿಗಳು ನಿಜಕ್ಕೂ ಅದ್ಭುತ. ನಿಂದಾಸ್ತುತಿಯಂತೆ ಕಂಡರೂ ನಿಂದಾಸ್ತುತಿಯಲ್ಲ. ಆಂಡಾಳ್ ಪ್ರಬಂಧದಲ್ಲಿ ನಾವು ಕಾಣುವುದು ಮನ್ಮಥನಿಗೆ ಬೇಡುವುದು, ಕೂಡಲ್ ಪರೀಕ್ಷೆ, ಪಶುಪಕ್ಷಿ, ಹೂ ಹಣ್ಣುಗಳನ್ನು ಬೇಡುವುದು. ಮೇಘಕ್ಕೆ ಶರಣಾಗುವುದು, ಸಂದೇಶಪಟ್ಟುವುದು, ಮದುವೆಯ ಕನಸು ಕಾಣುವುದು, ಬೇರೆ ಆಳ್ವಾರ್‌ಗಳಂತೆ ತಾಯಿಯ, ಸಖಿಯ ಮಾತಿನ ಮೂಲಕ ತನ್ನ ವಿರಹವನ್ನು ವಿಸ್ತರಿಸುವ ರೀತಿ ಈಕೆಯ ಸಾಹಿತ್ಯದಲ್ಲಿ ಕಂಡುಬರುವುದಿಲ್ಲ. ಮಡಲನ್ನಂತೂ ದೂರವಾಗಿಯೇ ಇರಿಸಿದ್ದಾಳೆ. ನಲುಮೆಯಿಂದಲೇ ಪರಮಾತ್ಮನ ಒಲವನ್ನು ಸಂಪಾದಿಸಿಕೊಂಡ ಧೀರೋದಾತ್ತನಾಯಕಿ ಆಂಡಾಳ್ ಎಂದು ನಿರ್ವಿವಾದವಾಗಿ ನಾವು ನಿರ್ಣಯಿಸಬಹುದು.

-ಇತಿಶಮ್-



# ಆಷಾಢ ಏಕಾದಶೀ

---ಅನಂತ ಚಿಂತಾಮಣಿ ಜ್ಯೋತಿಷೀ.

ಪ್ರತಿ ಮಾಸದಲ್ಲಿಯ ಶುಕ್ಲ ಹಾಗೂ ಕೃಷ್ಣ ಪಕ್ಷದಲ್ಲಿಯ ಹನ್ನೊಂದನೆಯ ತಿಥಿಗೆ ಏಕಾದಶಿ ಎನ್ನುವರು. ಈ ದಿನದಂದು ಭಾವಿಕರು ಉಪವಾಸದಿಂದಿದ್ದು ಪಾಂಡುರಂಗನ (ವಿಷ್ಣುವಿನ) ಆರಾಧನೆ ಮಾಡುವರು. ಪ್ರತಿ ಮಾಸದಲ್ಲಿ ಎರಡರಂತೆ ವರ್ಷದಲ್ಲಿ ೨೪ ಏಕಾದಶಿಗಳಾಗುತ್ತಿದ್ದು ಆಷಾಢ ಹಾಗೂ ಕಾರ್ತೀಕ ಮಾಸಗಳ ಶುಕ್ಲ ಪಕ್ಷಗಳಲ್ಲಿ ಬರುವ ಏಕಾದಶಿಗಳು ಮಹಾ ಏಕಾದಶಿಗಳಾಗಿವೆ. ಈ ದಿವಸದಲ್ಲಿ ಭಗವಾನ್ ವಿಷ್ಣುವು ಶಯನಮಾಡುವುದರಿಂದ ಶಯನೀ ಏಕಾದಶಿ ಎಂದು ಪ್ರಸಿದ್ಧವಾಗಿದೆ. ಈ ದಿನದಲ್ಲಿ ಮಂದಿರದಲ್ಲಿ ಭಜನೆ ಕೀರ್ತನೆ ನಾಮಸ್ಮರಣೆ ನಡೆಯುತ್ತಿವೆ. ಸೂರ್ಯದರ್ಶನವು ಆಷಾಢದಲ್ಲಿ ತೀರ ಕಡಿಮೆ. ಅದಕ್ಕಾಗಿ ಭಗವಾನ್ ವಿಷ್ಣುವು ಮಲಗುತ್ತಾನೆ ಎಂಬ ಕಲ್ಪನೆಯಿದೆ.

ಮೃದುಮಾನ್ಯ ಎಂಬ ಹೆಸರಿನ ರಾಕ್ಷಸನು ಭಗವಾನ್ ಶಿವನನ್ನು ಉಪಾಸಿಸಿ ಪ್ರಸನ್ನಗೊಳಿಸಿದನು. ಆಗ ಶಿವನು ನೀನು ಯಾವ ಪ್ರಾಣಿಯಿಂದಲೂ ಮರಣ ಹೊಂದಲು ಅಸಾಧ್ಯ. ಆದರೆ ಒಂದು ಸ್ತ್ರೀಯ ಮೂಲಕ ನಿನಗೆ ಸಾವು --ಎಂಬ ವರವನ್ನು ಕೊಟ್ಟನು. ಈ ವರದಿಂದ ಕೊಬ್ಬಿ, ಎಲ್ಲ ದೇವರುಗಳನ್ನು ಗೆದ್ದುಕೊಂಡನು. ವಿಷ್ಣು ಕೂಡ ಪರಾಜಿತಗೊಂಡನು. ವಿಷ್ಣು ಸಹ ಎಲ್ಲ ದೇವರೂ ಶಿವನಲ್ಲಿ ಹೋದರು. ಆದರೆ ಪ್ರತ್ಯಕ್ಷ ಶಿವನೇ ವರ ಕೊಟ್ಟಿದ್ದರಿಂದ ಶಿವನಿಗೆ ಏನೂ ಮಾಡಲು ಆಗಲಿಲ್ಲ.

ಮೃದುಮಾನ್ಯನು ಉನ್ಮತ್ತನಾಗಿದ್ದರಿಂದ ಬ್ರಹ್ಮ ವಿಷ್ಣು ಶಿವ ಮತ್ತು ಇತರ ದೇವತೆಗಳು ಗುಹೆಯಲ್ಲಿ ಅಡಗಿಕೂತರು. ಮೃದುಮಾನ್ಯನು ಈ ದೇವತೆಗಳೆಲ್ಲರನ್ನು ಹುಡುಕುತ್ತ ಈ ಗುಹೆಯ ಹತ್ತಿರ ಬಂದು ಗುಹೆಯ ಬಾಯಿಗೆ ಹೋಗಿ ನಿಂತು ಬಿಟ್ಟನು. ಮೂರು ದಿವಸ ತನಕ ದೇವತೆಗಳಿಗೆ ಉಪವಾಸವಾಯಿತು. ಕೊನೆಗೆ ಈ ಮೂವರು ದೇವತೆಗಳಿಂದ ನಿಟ್ಟುಸಿರು ಕೂಡಿ ಒಂದು ದೇವತೆಯು ಉತ್ಪನ್ನಳಾದಳು. ಅವಳ ಹೆಸರು ಏಕಾದಶಿ. ಈ ದೇವಿಯು ಎಲ್ಲ ದೇವತೆಗಳಿಗೆ ಅಭಯಕೊಟ್ಟು ಸ್ವತಃ ತಾನು ಮೃದುಮಾನ್ಯನೊಡನೆ ಹೋರಾಡಿದಳು. ಮೃದುಮಾನ್ಯನ ಮರಣದಿಂದಲೇ ದೇವಿಯನ್ನು ಎಲ್ಲರೂ ಪ್ರಸಂಸಿಸಿದರು. ಅದಕ್ಕಾಗಿ ಅವಳು ಪ್ರಸನ್ನಳಾಗಿ ನನ್ನ ಏಕಾದಶಿ ವ್ರತವನ್ನು ಯಾರು ಮಾಡುತ್ತಾರೋ ಅವರು ಎಲ್ಲ ಪಾತಕಗಳಿಂದ ಮುಕ್ತರಾಗುತ್ತಾರೆ. ಅಂದಿನಿಂದ ಏಕಾದಶಿ ವ್ರತ ಮಾಡುವ ಪರಂಪರೆ ನಡೆದುಬಂದಿದೆ.

ಈ ಏಕಾದಶಿ ವ್ರತದ ದಿವಸ ಉಪೋಷಣೆಯಿಂದ ಇದ್ದು ಪವಿತ್ರಾತ್ಮವಂತರಾಗಿ ಭಗವತ್‌ಚಿಂತನೆಯಲ್ಲಿ ತೊಡಗುವರು. ಏಕಾದಶಿ ವ್ರತವನ್ನು ೮ರಿಂದ ೮೦ ವರ್ಷ ತನಕ ಸ್ತ್ರೀ ಪುರುಷರು ಮಾಡಬಹುದಾಗಿದೆ. ಉಪೋಷಣೆಯಿಂದ ಶರೀರಶುದ್ಧಿಯೂ ಆರೋಗ್ಯಲಾಭವು ಆಗುತ್ತದೆ.

ಏಕಾದಶಿ ಎಂಬುದೊಂದು ಕಾಲಗಣನೆಯ ಅಂಶವಷ್ಟೆ. ಪ್ರತಿತಿಂಗಳೂ ಬರುವಂತಹದ್ದೇ, ಆದರೂ ಅವುಗಳಲ್ಲಿ ಹಲವಕ್ಕೆ ಹಲವು ವೈಶಿಷ್ಟ್ಯ. ವೈಕುಂಠ ಏಕಾದಶೀ, ಕಾರ್ತೀಕ ಏಕಾದಶೀ, ಆಷಾಢ ಏಕಾದಶೀ ಎಂಬಿತ್ಯಾದಿಯಾಗಿ. ಆಷಾಢದಲ್ಲಿ ಏಕಾದಶಿಗಳು ಎರಡು ಬಾರಿ ಬಂದರೂ ಶುಕ್ಲಪಕ್ಷದ್ದುಬಹುಮುಖ್ಯ ಎಂಬುದನ್ನು ವಿವರಿಸಲಾಗಿದೆ.

ವಿಟ್ಠಲವೆಂದರೆ ವಿಷ್ಣುವಿನ ರೂಪವಾಗಿದೆ. ಹೀಗಾಗಿ ಪಂಢರಪುರಕ್ಕೆ ವಿಠ್ಠಲದರ್ಶನಕ್ಕಾಗಿ ಅಂದು ಹೋಗುತ್ತಾರೆ. ಏಕಾದಶಿಯು ಪಾಂಡುರಂಗನ ಪ್ರಿಯತಿಥಿಯಾಗಿದೆ. ಏಕಾದಶಿಗಳಿಗೆ ತಪ್ಪದೇ ಪಂಢರಪುರಕ್ಕೆ ಹೋಗುವವರಿಗೆ 'ವಾರಕರಿ' ಎನ್ನುತ್ತಿದ್ದು ಅವರು 'ವಾರಕರಿ' ಆಗಲು ದೀಕ್ಷೆಯನ್ನು ಕೊಳ್ಳಬೇಕು. ಆಷಾಢ ಕಾರ್ತೀಕ ಚೈತ್ರ ಮಾಘದ ಏಕಾದಶಿಗಳಿಗೆ ಪಂಢರಪುರಕ್ಕೆ ಆಳಂದಿಯಿಂದ ಜ್ಞಾನೇಶ್ವರನ, ದೇಹೂದಿಂದ ತುಕಾರಾಮನ, ತ್ರ್ಯಂಬಕೇಶ್ವರನಿಂದ ನಿವೃತ್ತಿನಾಥನ, ಸಾಸವಡದಿಂದ ಸೋಪಾನದೇವನ, ವೈಕಣದಿಂದ ಏಕನಾಥನ, ದಹಿಂಡಾಣದಿಂದ ದಹಿಕಣಕ್ಕನ ಮತ್ತು ಉತ್ತರ ಹಿಂದುಸ್ಥಾನದಿಂದ ಕಬೀರನ ಹೀಗೆ ಮುಖ್ಯವಾಗಿ ಏಳು ಪಲ್ಲಕ್ಕಿಗಳು ಬರುತ್ತವೆ. ಇವುಗಳಲ್ಲಿ ಕಬೀರನ ಪಲ್ಲಕ್ಕಿಯು ಬಿಳಿಯದು. ಉಳಿದವು ಕಾಷಾಯವರ್ಣದವು. ಎಲ್ಲವುಗಳಲ್ಲಿ ಜ್ಞಾನೇಶ್ವರನ ಪಲ್ಲಕ್ಕಿಯು ಅತ್ಯಂತ ಹಳೆಯದು ಎನ್ನಲಾಗಿದೆ.

ಆಷಾಢ ಏಕಾದಶಿಗೆ ಪಂಢರಪುರದ ವಿಠೋಬ ರುಕ್ಮಿಣಿ ಬಂಗಾರದ ಮೂರ್ತಿ ರಥ ಯಾತ್ರೆಯಿರುತ್ತದೆ. ತೇರನ್ನೆಳೆಯುವುದು ಪುಣ್ಯಕರವೆಂದು ಭಾವಿಕರು ಭಾವಿಸಿದ್ದಾರೆ. ಭಾವಿಕರು ಟೊಂಕದ ಮೇಲೆ ಕೈಯಿಟ್ಟುಕೊಂಡ ಪಾಂಡುರಂಗನ ದರ್ಶನದ ಪುನೀತರಾಗುವರು. ಆಷಾಢ ಏಕಾದಶಿ ದಿವಸದಂದು ಭಗವದ್ಗೀತೆಯು ೯ನೆಯ ಅಧ್ಯಾಯ ಹಾಗೂ ಕಾರ್ತೀಕ ಏಕಾದಶಿ ದಿನದಂದು ೧೫ ನೆಯ ಅಧ್ಯಾಯವನ್ನು ಭಕ್ತರು ಓದುತ್ತಾರೆ.



## ತಿರುಪತಿಯಲ್ಲಿ ವಸತಿಗಾಗಿ ಸೂಚನೆ

ತಿರುಪತಿಯಲ್ಲಿ ವಸತಿಗಾಗಿ ಮುಂಗಡ ಕಾಯ್ದಿರಿಸುವಿಕೆಗಾಗಿ ಯಾತ್ರಿಕರು ಹಣವನ್ನು ಎಂ.ಓ. ಮೂಲಕ ಕಳುಹಿಸುವುದನ್ನು ಸ್ವೀಕರಿಸಲಾಗುವುದಿಲ್ಲ. ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್ (ರಿಸೆಪ್ಷನ್) ತಿ.ತಿ.ದೇ. ತಿರುಪತಿ ಅಥವಾ ಎಕ್ಸಿಕ್ಯೂಟಿವ್ ಆಫೀಸರ್ ತಿ.ತಿ.ದೇ. ತಿರುಪತಿ ಇವರ ಹೆಸರಿನಲ್ಲಿ ಡಿ.ಡಿ. ಯನ್ನು ಕಳುಹಿಸಬೇಕು. ಡಿ.ಡಿ. ಯ ಜೊತೆಗೆ ಬರುವ ದಿನಾಂಕ, ಬರುವವರ ಸಂಖ್ಯೆ ತಿರುಪತಿಯಲ್ಲಿ ವಸತಿಯನ್ನು ಕಾಯ್ದಿರಿಸಬೇಕಾದ ದಿನಾಂಕಗಳನ್ನು ಬರೆದು ಕಳುಹಿಸಬೇಕು.

**ಅಸಿಸ್ಟೆಂಟ್ ಎಕ್ಸಿಕ್ಯೂಟಿವ್ ಆಫೀಸರ್,**
(ರಿಸೆಪ್ಷನ್) ತಿ.ತಿ.ದೇ. ತಿರುಪತಿ.

# ತಿರುಮಲೆಯ ಯಾತ್ರಿಕರಿಗೆ ವಿಶೇಷ ಸೌಲಭ್ಯಗಳು

* ಎಲ್ಲ ವರ್ಗಗಳವರಿಗೂ ಉಚಿತವಾಗಿ ದೊರೆಯುವ ಪರಿಶುದ್ಧ ಸತ್ರಗಳು ಅಥವಾ ಸುಲಭ ದರದಲ್ಲಿ ದೊರೆಯುವ ಬೀಡುಗಳ ವಸತಿ ಸೌಕರ್ಯ.

* ವೆಂಕಟೇಶ್ವರಸ್ವಾಮಿ ದರ್ಶನದ ಯಾತ್ರಿಕರ ಕಾಯುವ ಕೋಣೆಗಳಲ್ಲಿ (ವೈಕುಂಠ) ಗಾಳಿ ಬೆಳಕುಗಳ ವ್ಯಾಪಕ ಏರ್ಪಾಡು.

* ಸರತಿಯ ಸಾಲಿನ ಕೋಣೆಗಳಲ್ಲಿ ಅಲ್ಪಾಹಾರ ಸೌಲಭ್ಯ.

* ಸುಲಭದರದ ಆಹಾರದ ಪೊಟ್ಟಣಗಳ ಮಾರಾಟ.

* ಸರತಿಯ ಸಾಲಿನ ಕೋಣೆಗಳಿಂದ ಹೊರಹೋಗಬೇಕಾದ ಅಗತ್ಯವಿಲ್ಲದಂತೆ ಶೌಚ ಗೃಹಗಳು.

* ಆಂಧ್ರಪ್ರದೇಶ್ ಹಯನೋತ್ಪಾದನಾವಿತರಣೆ ಇಲಾಖೆಯವರಿಂದ ಶುದ್ಧ ಹಾಲಿನ ಮಾರಾಟ.

* ಯಾತ್ರಿಕರ ವಾಚನಾಭಿರುಚಿಯನ್ನು ಹೆಚ್ಚಿಸುವ ತಿ.ತಿ.ದೇ. ಪ್ರಕಟಣೆಗಳಾದ ಪುಸ್ತಕಗಳು, ದೈವಚಿತ್ರಗಳ ಮಾರಾಟ.

* ಸರತಿಯ ಸಾಲಿನ ಯಾತ್ರಿಕರಿಗೆ ಉಲ್ಲಾಸಕರವಾದ ಟೆಲಿವಿಷನ್‌ಪ್ರದರ್ಶನ, ಭಕ್ತಿ ಸಂಗೀತ.

* ಸರತಿಯ ಸಾಲು ಹಾಗೂ ತಿರುಮಲೆಯ ಕಾಲುಹಾದಿಯ ೭-ನೇ ಮೈಲಿಯ ಬಳಿ ವೈದ್ಯಸೌಲಭ್ಯ, ಉಪಹಾರ ಸೌಲಭ್ಯ ಕ್ಯಾಂಟೀನ್.

* ಯಾತ್ರಿಕರ ವಸ್ತುಗಳು, ಪಾದರಕ್ಷೆಗಳ ರಕ್ಷಣೆಗಾಗಿ ಪ್ರತ್ಯೇಕ ಸೌಲಭ್ಯ.

* ತಿರುಮಲೆಯ ಸ್ವಾಗತ ಕಚೇರಿಯಿಂದ ವಿವಿಧ ಸ್ಥಳಗಳಿಗೆ ಆಟೋ ಸೌಕರ್ಯ ಹಾಗೂ ಉಚಿತ ಬಸ್ ಸೌಕರ್ಯ.

* ತಿರುಮಲೆಗೆ ನಡೆದು ಹೋಗುವವರ ವಸ್ತುಗಳನ್ನು ಸುರಕ್ಷಿತವಾಗಿ ತಿರುಮಲೆಗೆ ಸೇರಿಸುವ ಅನುಕೂಲ.

* ಯಾತ್ರಿಕರನ್ನು ಪಂಡಾಗಳು, ವಂಚಕರಿಂದ ತಪ್ಪಿಸಲು ಪೇಷ್ಕಾರ್ ಪದವಿಯ ಅಧಿಕಾರಿಯನ್ನು ಮಹಾದ್ವಾರದಲ್ಲಿ ನೇಮಿಸುವಿಕೆ.

* ಸರತಿಯ ಸಾಲಿನ ಕೋಣೆಗಳ ಯಾತ್ರಿಕರ ದೂರುಗಳ ವಿಚಾರಣೆಗಾಗಿ, ಅನುಕೂಲಗಳ ಏರ್ಪಾಡಿಗಾಗಿ ಪೇಷ್ಕಾರ್ ಪದವಿಯ ಮತ್ತೊಂದು ಅಧಿಕಾರಿ ಮತ್ತು ಸಿಬ್ಬಂದಿ.

**ದೇವಸ್ಥಾನದ ಪ್ರಯತ್ನಗಳಲ್ಲಿ ಇವು ಕೆಲವು ಮಾತ್ರವೇ.**

ಗಮನಿಕೆ: ತಿರುಮಲೆಯಲ್ಲಿ ಅಂಚೆ ಕಚೇರಿಯು ರಾತ್ರಿ ೮--೩೦ ಗಂಟೆಯವರೆಗೆ ಕೆಲಸಮಾಡುತ್ತದೆ. ಜೊತೆಗೆ ಪ್ರಧಾನ ಅಂಚೆ ಕಚೇರಿಯು ರಾತ್ರಿ ೧೦-೩೦ ರಿಂದ ೧--೦೦ ಗಂಟೆಯವರೆಗೆ ಕೆಲಸಮಾಡುತ್ತದೆ.

## TIRUMALA TIRUPATI DEVASTHANAMS, TIRUPATI

Visit TIRUMALA !





*DURING*

# SRI VENKATESWARASWAMY BRAHMOTSAVAM

## PROGRAMME

| Date | Morning Festival | Evening Festival |
|---|---|---|
| 25-9-95 | — | Ankurarpanam |
| 26-9-95 | Dwajarohanam | Sesha Vahanam (Big) |
| 27-9-95 | Sesha Vahanam (Small) | Hamsa Vahanam |
| 28-9-95 | Simha Vahanam | Muthyapu Pandili Vahanam |
| 29-9-95 | Kalpavriksha Vahanam | Sarvabhoopala Vahanam |
| 30-9-95 | Mohini Avataram | GARUDASEVA with Lakshmi haram and Makara Kantika |
| 1-10-95 | Hanumantha Vahanam | Vasantotsavam (Evening) Gaja Vahanam (Night) |
| 2-10-95 | Sooryaprabha Vahanam | Chandraprabha Vahanam |
| 3-10-95 | RADHOTSAVAM | Asva (Horse) Vahanam |
| 4-10-95 | Pallaki Utsavam, Tiruchi Utsavam and Teerthavari | Dwajavarohanam |

- ✻ There will be Unjal festival in the evenings.
- ✻ Kalakshepams, music and discourses will also be held by eminent scholars and artistes.
- ✻ Festival Programmes will be announced sufficiently in advance every day.


A View of Lord Venkateswara Swamy Vari Temple, Tirumala

# A HEALING TOUCH

## T. T. DEVASTHANAMS INTRODUCES SRI BALAJI AROGYAVARAPRASADINI SCHEME

For ages, Tirumala, the abode of Lord Venkateswara, has been a great centre of pilgrimage. Thousands of devotees visit the sacred hills every day and offer their solemn prayers to the Lord for their spiritual and physical well-being.

Alleviating human suffering has been a part of dedicated efforts of TTD to the mankind. TTD already manages a Leprosorium, centre for physically handicapped, a poor home and also a central hospital. To provide the most advanced medical technology to the needy, the TTD has launched another monument, a blessing from the Lord by opening Sri Venkateswara Institute of Medical Sciences -- a sophisticated super speciality centre on the lines of AIIMS of New Delhi & JIMPER of Pondicherry and PGI of Chandigarh. Total well being of man is the aim of Sri Venkateswara Institute of Medical Sciences, which apart from offering service, training and education in medical sciences, also encourages Research and development.

The doors to such a state of the art technology should be open to our poor and disabled brethren.

With a view to achieving this, Sri Venkateswara Institute of Medical Sciences has introduced a New scheme Balaji Arogyavaraprasadini Scheme. To accomplish the goal of proving the sophisticated medical technology to every individual at an affordable rate, we invite the generous co-operation of philanthropists and the general public.

### The Scheme in essence:

A donor can make an endowment of Rs. 1000/- or multiples thereof / Rs. 1 lakh / Rs. 5 lakhs / Rs. 10 lakhs to T.T. Devasthanams which will in turn contribute matching grant. The entire amount will be deposited in fixed deposit in a nationalised Bank and the interest accrued on it will be utilised for providing free medical services to the poor and the needy.

A Chair in Sri Venkateswara Institute of Medical Sciences will be named after the donor who contributes Rs. 10 lakhs or above. These endowment chairs are purely research oriented.

- Donations can be made by any individual / family / company / firms etc.
- The name of the donor who endows Rs. 5 lakhs or more will be displayed prominently in the Reception hall of the hospital.
- The discharge ticket of the benefited patient will carry the name of the donor.

### Additional Benefit and facilities :

- Donations to Sri balaji Arogyavaraprasadini Scheme are exempted from Income Tax under 80 (G)
- Paid rooms / Air conditioned rooms will be allotted to family members of the donor in the hospital.
- Paid rooms can be named after donors who contribute a sum of Rs. 5 lakhs or above.
- By paying Rs. 5 lakhs and above, a donor may sponsor one operation per year.
- Donors can sponsor feeding of the In-patients and out-patients. They may also sponsor a travel fellowship for the faculty per year.

All donations, by D.Ds. drawn in favour of The Executive Officer, T.T. Devasthanams, Tirupati-517 501 (Andhra Pradesh) should reach the Director, Sri Venkateswara Institute of Medical Sciences, Tirupati along with the following particulars.

- Name and address along with the latest passport-size photographs of the family members of the donor who contributes Rs. 1 lakh or more.
- Name and address of the person to whom Income Tax Exemption Certificate is to be issued.

The donors are also welcome to offer equipment, vehicles etc. to SVIMS or even sponsor health camps in rural areas, if they so desire. Further details can be had from

**The Executive Officer**
**T.T. Devasthanams, Tirupati**
**or**
**The Director**
**Sri Venkateswara Institute of Medical Sciences, Tirupati**

**EXECUTIVE OFFICER**

# ತುಳಸೀವೈದ್ಯ

---ಡಾ|| ಎನ್. ಜಿ. ರಘುಮೋಹನ್.

ತುಳಸಿ ಎಲ್ಲರ ಮನೆಯ ಮುಂದೆ ಇದ್ದರೂ, ಹಿತ್ತಲಗಿಡ ಮದ್ದಲ್ಲ ಎನ್ನುವ ಗಾದೆಯೂ ಇದೆ ಎಲ್ಲರ ಮಾತಿನಲ್ಲೂ. ಎಲ್ಲ ಗಿಡಗಳೂ ಮದ್ದು ಆಗದೆ ಇರಬಹುದು. ಆದರೆ ತುಳಸೀಗಿಡ ಮಾತ್ರ ಮದ್ದೇ ಎಂಬುದು ವೈದಿಕೀಯವಾಗಿ ಸಿದ್ಧವಾಗಿರುವ ಅಂಶ. ಅದರ ಔಷಧೀಯಗುಣಗಳನ್ನು ಇಲ್ಲಿ ವಿವರಿಸಲಾಗಿದೆ.

ನಮ್ಮಲ್ಲಿ ತುಳಸಿಯನ್ನು ಬಹಳಷ್ಟು ಜನ ಪೌರಾಣಿಕ ದೃಷ್ಟಿಯಿಂದ ಮತ್ತು ಪೂಜೆಯ ವಸ್ತುವನ್ನಾಗಿ ಮನೆ ಮನೆಗಳಲ್ಲಿ ಪೂಜಿಸುವ ವಾಡಿಕೆ ತಲ ತಲಾಂತರದಿಂದ ಬಂದಿದೆಯಷ್ಟೆ. ಅದರ ವಿಷಯವಾಗಿ ಹೆಚ್ಚಿನ ಮಾಹಿತಿ ತಿಳಿದಲ್ಲಿ ನಮಗೆ ಇನ್ನೂ ಹೆಚ್ಚಿನ ವಿಶ್ವಾಸ ಮೂಡಿ ನಮಗೆ ಅದರ ಬಗ್ಗೆ ಒಂದು ಗೌರವ ಮತ್ತು ಹೆಚ್ಚಿನ ಆತ್ಮಪ್ರಶಂಸೆ ನಮ್ಮ ಹಿಂದೂ ಸಂಪ್ರದಾಯದಲ್ಲಿ ಮೂಡಿಬರುತ್ತೆ.

ತುಳಸಿಯ ಪ್ರತಿಯೊಂದು ಭಾಗದಿಂದಲೂ ವೈದ್ಯಕೀಯ ಮತ್ತು ಅಂಟುರೋಗಗಳ ನಿವಾರಣೆಗೆ ಅನುಕೂಲವಾಗಿದೆ. ಸಿಂಹಳ ದೇಶದಲ್ಲಿ ವೀಳೆಯದಲೆಗೆ ಬದಲಾಗಿ ತುಳಸಿ ಎಲೆಗಳನ್ನು ಎಲೆ ಅಡಿಕೆ ತರಹ ಉಪಯೋಗಿಸುತ್ತಾರೆ. ಎಲೆಯಿಂದ ಕಷಾಯ ಮಾಡಿ, ಕೆಮ್ಮು ಮತ್ತು ನೆಗಡಿಗೆ ಉಪಯೋಗಿಸುತ್ತಾರೆ, ತುಳಸಿಯ ಹಸಿಬೇರನ್ನು ನೀರಿನಲ್ಲಿ ಅರೆದು ಜೇನು ನೊಣ ಕಚ್ಚಿದ ಜಾಗಕ್ಕೆ ಹಚ್ಚಿದರೆ ಮತ್ತು ಮಕ್ಕಳಿಗೆ ಸೊಳ್ಳೆ ಕಚ್ಚಿ ಊದಿರುವ ಸ್ಥಳಕ್ಕೆ ಹಚ್ಚಿದಲ್ಲಿ ಊತ ಕಡಿಮೆಯಾಗುತ್ತದೆ, ಮಲೇರಿಯ ರೋಗಕ್ಕೂ ಸಿದ್ಧ ಔಷಧ.

ಚಕ್ರದತ್ತ ಎಂಬ ಆಯುರ್ವೇದ ಶಾಸ್ತ್ರಜ್ಞನು ತುಳಸಿಯ ಕೆಲವು ಉಪಯೋಗ ಮತ್ತು ಮಹಾ ಸಿದ್ಧೌಷಧಗಳನ್ನು ತಿಳಿಸಿರುತ್ತಾನೆ. ಎದೆ ನೋವು ಮತ್ತು ಕೆಮ್ಮಿಗೆ ತುಳಸಿ ಬೇರು, ಎಲೆ ಜೊತೆಗೆ ಶುಂಠಿ ಬೆರಸಿ ಕೊಟ್ಟಲ್ಲಿ ಹೃದಯರೋಗ ಕಡಿಮೆಯಾಗುತ್ತದೆ. ತುಳಸಿ ಎಲೆಯ ರಸವನ್ನು, ಜೇನುತುಪ್ಪದ ಜೊತೆಗೆ ಬೆರಸಿ ದಿನಾ ಸೇವಿಸಿದಲ್ಲಿ ಮೈಕಾಂತಿ ಮತ್ತು ಮುಖ ಸೌಂದರ್ಯ ಒಂದು ತಿಂಗಳಲ್ಲಿ ಹೆಚ್ಚಿಸುತ್ತದೆ. ಇದರಲ್ಲಿ ಸಂಶಯವೇ ಇಲ್ಲವೆಂದು ಹೇಳುತ್ತಾನೆ, ಕಾಲರಾ, ಶೀತಜ್ವರ. ಮಲೇರಿಯ ರೋಗ ಪೀಡಿತ ಪ್ರದೇಶಗಳಲ್ಲಿ ತುಳಸಿ ಕಷಾಯದ ಉಪಯೋಗದಿಂದ ರೋಗಿಯನ್ನು ಬಹಳಷ್ಟು ಸುದಾರಿಸಬಹುದು.

ಆಗ ತಾನೆ ಎಲೆಗಳನ್ನು ಹಿಂಡಿ ತಾಜಾ ರಸವನ್ನು ಸೇವಿಸಿದರೆ; ವಾಂತಿಯನ್ನು ಒಂದು ಗಂಟೆಯಲ್ಲಿ ತಡೆಗಟ್ಟಬಹುದು ಮತ್ತು ಕರುಳಿನ ಕ್ರಿಮಿಗಳು ನಾಶವಾಗುತ್ತವೆ.

ಹಾವು ಕಚ್ಚಿರುವವರಿಗೆ ಹಸಿರು ತುಳಸಿ ಸೊಪ್ಪು ಹೂವಿನ ಮೇಲ್ಭಾಗದ ಚಿಗುರು ಮತ್ತು ಎಳೆಕಾಷ್ಠಗಳಿಂದ ಅರೆದು ಬಂದ ರಸದಲ್ಲಿ "ಥೈಮಾಲ್" ಎಂಬ ರಸಾಯನಿಕವಿದ್ದು ಅದು ಹೆಚ್ಚಿನ ಉಪಾಯಕಾರಿ ಔಷವೇ ಆಗಿದೆ. ಎರಡು ಮೂರು ದಿನಗಳು ಸತತವಾಗಿ ಎರಡೆರಡು ಚಮಚದ ಹಾಗೆ ಕೊಟ್ಟ ಮೇಲೆ ಗುಣಹೊಂದುತ್ತಾನೆ. ಹೆಚ್ಚಿನ ವಿಷದ ಹಾವಾಗಿದ್ದ ಪಕ್ಷಕ್ಕೆ ಮೈ ಕೈಗೆಲ್ಲಾ ತಿಕ್ಕಿ ಕಿವಿ, ಮೂಗು, ಕಣ್ಣಿನ ರೆಪ್ಪೆ, ಬಾಯಿ, ಸೊಂಟ ಮತ್ತು ಹೊಕ್ಕಳಲ್ಲಿ ಚೆನ್ನಾಗಿ ತಿಕ್ಕಬೇಕು, ತಕ್ಷಣ ಎಚ್ಚೆತ್ತುಕೊಳ್ಳುತ್ತಾನೆ.

ಸಿಡಿಲು ಮತ್ತು ಭಯಾನಕ ಸಂದರ್ಭದಲ್ಲಿ ಮನುಷ್ಯನ ಪ್ರಜ್ಞೆ ಹೋಗಿದ್ದಲ್ಲಿ, ಕಿವಿಯಲ್ಲಿ ಇಟ್ಟುಕೊಂಡಿರುವ "ತುಳಸಿ"ಯ ಕೇವಲ ವಾಸನೆಯಿಂದ ಪ್ರಜ್ಞೆ ಮರಳಿಬರುತ್ತದೆ. ಕಿವಿ ನೋವು ಇರುವವರಿಗೆ ವಾಸಿಯಾಗುತ್ತದೆ. ಇಂದಿಗೂ ನಮ್ಮ ಸಂಪ್ರದಾಯದಲ್ಲಿ ದೇವರಿಗೆ ಪೂಜಿಸಿದ ಒಂದು ತುಳಸಿ ದಳ ಕಿವಿಯಲ್ಲಿ ಇಟ್ಟುಕೊಳ್ಳುವ ವಾಡಿಕೆ ಇದೆ- ಎಂಥ ದಿವ್ಯ ಆಚಾರ, ವಿಚಾರ. ತುಳಸಿ ರಸವನ್ನು ಆಗಾಗ ಕಿವಿಗೆ ಹಾಕಿಕೊಂಡಲ್ಲಿ ಕಿವಿರೋಗ ಬರುವುದಿಲ್ಲ.

ನೇಪಾಳ್, ಬಂಗ್ಲಾದೇಶ, ಮತ್ತು ಚೈನಾ ದೇಶಗಳಲ್ಲಿ, ತುಳಸಿ ಬೀಜವನ್ನು ಅರೆದು ಅರ್ಧದಿಂದ ಒಂದು ಔನ್ಸ್ ರಷ್ಟು ಜೇನುತುಪ್ಪದಲ್ಲಿ ಸೇವಿಸಿದಾಗ ಬಹಳಷ್ಟು ಮೂತ್ರರೋಗಗಳು ತಹಬಂದಿಗೆ ಬರುತ್ತೆ, ಗೊನೋರಿಯಾ ಮತ್ತು ಚರ್ಮರೋಗಗಳಿಗೆ ಇದನ್ನು ಕಡ್ಡಾಯವಾಗಿ ಉಪಯೋಗಿಸುತ್ತಾರೆ. ತುಳಸಿ ಕಾಂಡ ನಮ್ಮ ಹಿಂದೂ ಸಮಾಜದಲ್ಲಿ ಹವನ ಹೋಮಕ್ಕೆ ಉಪಯೋಗಿಸುತ್ತಾರೆ. ಇದರ ಹೊಗೆಯಿಂದ ಆಸ್ತನು, ರುಮಾಟಿಸಮ್ ರೋಗ ನಿವಾರಣೆ ಖಂಡಿತ, ಈ ತುಳಸಿಯ ಬೇರು ಮತ್ತು ಕಾಂಡದಿಂದ ವಾಸನೆ ಎಣ್ಣೆಗಳಾದ "ಯುಗಿನಾಲ್" "ಮಿಥೇಲ್ ಚವಿಕೋಲ್" ಎಂಬ ತೈಲಗಳಿದ್ದು ಅವುಗಳಿಂದ ಶ್ವಾಸಕೋಶಗಳ ಮೇಲೆ ಉತ್ತಮ ಪರಿಣಾಮ ಮಾಡುತ್ತದೆ.

ಚಕ್ರದತ್ತ ಎಂಬುವನ ಪ್ರಕಾರ ಹಿಂದೆ ಹೇಳಿದಂತೆ ತುಳಸಿ ವನ ಅಥವಾ ಗಿಡವಿರುವ ಕಡೆ ಸೊಳ್ಳೆ ಇರುವುದಿಲ್ಲ. ಅದರ ಬೇರಿನ ಪುಡಿಯಿಂದ ಚೇಳಿನಿಂದ ಕಚ್ಚಿದ ಜಾಗಕ್ಕೆ ಹಚ್ಚಿದಲ್ಲಿ ಉರಿ ಕಡಿಮೆಯಾಗುತ್ತದೆ.



ವೃಂದರಮಾಧವ ಮತ್ತು ರತ್ನಾಕರ ಎಂಬುವವರು "ತುಳಸಿ ಮಣಿ ಮಾಲೆಯ" ರಹಸ್ಯವನ್ನು ಮತ್ತು ನಮ್ಮ ಪ್ರಾಚೀನ ಸಂಪ್ರಾದಾಯ ಬರೀ ಬೂಟಾಟಿಕೆಯದಲ್ಲ, ಎನ್ನುವ ವಿಷಯವನ್ನು ತಿಳಿಸಿದ್ದಾರೆ. ತುಳಸಿ ಮಾಲೆ ಹಾಕಿಕೊಂಡವನಿಗೆ ಅದರಿಂದ ಒಂದು ತರಹ ವಿದ್ಯುತ್ ಉಂಟಾಗಿ ಹಾಕಿಕೊಂಡ ಮನುಷ್ಯನ ಹತ್ತಿರ ಯಾವ ಜಂತುವೂ ಸುಳಿಯುವುದಿಲ್ಲ. ಹತ್ತಿರ ಮತ್ತು ದೇಹದ ಸುತ್ತು ಮುತ್ತಲು ಇರುವ ಜಂತು ಮತ್ತು ಕ್ರಿಮಿಗಳು ದೂರ ಸರಿದು ಅವನನ್ನು ಭಯಾನಕ ರೋಗಗಳಿಂದ ಕಾಪಾಡುತ್ತದೆ. ಇದೇ ನಿಯಮ ರೇಷ್ಮೆ ಬಟ್ಟೆಯಲ್ಲಿ ಕೂಡ ಇದೆ. ಇದೇ ಬಹುಶಃ ನಮ್ಮ ಹಿರಿಯರ ಮಡಿವಂತಿಕೆಯ ಜಾಣ್ಮೆ ಇರಬಹುದು. ನಮ್ಮ ಪ್ರತಿಯೊಂದು ರೀತಿ ನೀತಿ ಪರಿಶೀಲಿಸಿದಾಗ ಇದೆಲ್ಲಾ ವಾಸ್ತವವಾಗಿ ತಿಳಿಯುತ್ತದೆ. ದೇವರ



**ಶ್ರೀ ಕಪಿಲೇಶ್ವರಸ್ವಾಮಿ ದೇವಾಲಯ**

**ಕಪಿಲತೀರ್ಥ, ತಿರುಪತಿ.**

ತಿರುಪತಿಯ ಕಪಿಲತೀರ್ಥದಲ್ಲಿರುವ
ಶ್ರೀ ಕಪಿಲೇಶ್ವರಸ್ವಾಮಿ
ದೇವಾಲಯದಲ್ಲಿ ಆಸ್ತಿಕ
ಭಕ್ತ ಪ್ರಯೋಜನಕ್ಕಾಗಿ--

**ನಿತ್ಯಾಭಿಷೇಕ ಸೇವೆ**

--ಏರ್ಪಡಿಸಲಾಗಿದೆ. ವರ್ಷಕ್ಕೆ ೪೨ ರೂಪಾಯಿ ಶುಲ್ಕ ಅಥವಾ ಒಂದೇ ಬಾರಿಗೆ ೫೦೦ ರೂಗಳ ಇಡುಗಂಟು ಹಾಗೂ ೪೨ ರೂಗಳ ಆರಂಭವರ್ಷದ ಶುಲ್ಕವನ್ನು ನೀಡುವುದರ ಮೂಲಕ ಈ ಸೇವೆಯನ್ನು ನಡೆಸಬಹುದಾಗಿದೆ. ವರ್ಷದಲ್ಲಿ ಎರಡು ಬಾರಿ ಇಬ್ಬರು ವಯಸ್ಕರನ್ನು ಈ ಸೇವೆಯ ಸಂದರ್ಶನಕ್ಕೆ ಅನುಮತಿಸಲಾಗುವುದು.

ಭಕ್ತರು ಈ ಸೌಲಭ್ಯವನ್ನು ಬಳಸಿಕೊಳ್ಳಬೇಕೆಂದು ಕೋರಲಾಗಿದೆ.

ತಿ. ತಿ. ದೇ.



ಕೃಷೆಗೆ ಪೂಜೆಗೆ ಕೂಡವಾಗ ರೇಷ್ಮೆ ಮಡಿ ಉಟ್ಟು ತುಳಸಿ ಮಾಲೆ ಹಾಕುವ ವಾಡಿಕೆ ಬಹಳವಾಗಿ ಇದೆ.

## ತುಳಸಿ ಮತ್ತು ಹೃದಯ ಬಡಿತ :

ಜಿಯಲಾಜಿಕಲ್ ಸರ್ವೆ ಆಫ್ ಇಂಡಿಯಾದವರು ತಮ್ಮ ಸಮೀಕ್ಷೆಯಲ್ಲಿ ಕ್ರೋಮಿಯಂಧಾತು ಹೆಚ್ಚಿನ ಪ್ರಮಾದಲ್ಲಿರುವ ಯಾವ ಪ್ರದೇಶಗಳಲ್ಲಿ ಇರುತ್ತದೆಯೋ ಅಲ್ಲೆಲ್ಲಾ ತುಳಸಿ ಗಿಡಗಳು ಹೆಚ್ಚು ಬೆಳೆಯುತ್ತದೆ -ಎಂದು ತಮ್ಮತನಿಖೆಯಿಂದ ತಿಳಿಸಿರುತ್ತಾರೆ. ವಿಶೇಷವಾಗಿ ಈ ತುಳಸಿ ಗಿಡಗಳು ತಿರುಪತಿಯ ಸುತ್ತ ಮುತ್ತ ಬದರೀ ಕ್ಷೇತ್ರದ ಗಂಗಾ ತೀರದಲ್ಲಿ, ಪೂರೀ ಜಗನ್ನಾಥ ಮತ್ತು ಕರ್ನಾಟಕ ಗೋವಾ ಮಣ್ಣಿನ ಪ್ರದೇಶಗಳಲ್ಲಿ ಯಥೇಚ್ಚವಾಗಿ ಬೆಳೆಯುತ್ತೆ. ಇದರಿಂದ ಈ ಕ್ಷೇತ್ರಗಳಲ್ಲಿ "ಕ್ರೋಮಿಯಂ" ಧಾತು ಮಣ್ಣಿನಲ್ಲಿ ಹೆಚ್ಚಾಗಿ ಇದೆಯೆಂದು ತಿಳಿದು ಬರುತ್ತೆ ಎರಡನೆಯದಾಗಿ ತುಳಸಿ ಗಿಡಗಳು ಬೆಳೆಯುವಾಗ ಮಣ್ಣಿನ ಸಾರದಿಂದ ಅತಿ ಹೆಚ್ಚಾಗಿ ಕ್ರೋಮಿಯಂ ಧಾತು ಅಂಶವನ್ನು ಎಳೆಯುತ್ತದೆ ಎಂದು ತಿಳಿಸಿರುತ್ತಾರೆ. ಕ್ರೋಮಿಯಂ ಧಾತು ಮನುಷ್ಯನಲ್ಲಿ ಈ ತರಹ ಕೆಲಸ ಮಾಡುತ್ತದೆ ಎಂದು ಅಮೇರಿಕನ್ ಸೊಸೈಟಿ ಆಫ್ ಸಾಯಿಲ್ ಸೈಂಟಿನವರು ಹೇಳಿರುತ್ತಾರೆ. ಮಾನವನ ರಕ್ತದಲ್ಲಿ, ಸಕ್ಕರೆ ಮತ್ತು ಕೊಲೆಸ್ಟರಾಲ್ ಪ್ರಮಾಣವನ್ನು ಹೆಚ್ಚದಂತೆ ಸಮ ಪ್ರಮಾಣದಲ್ಲಿ ಯಾವಾಗಲೂ ಇರುವುದಕ್ಕೆ ಕೋಮಿಯಂ ಬಹಳಷ್ಟು ಬೇಕು. ಈ ಧಾತು ಕಡಿಮೆಯಾದಲ್ಲಿ ರಕ್ತದಲ್ಲಿ ಕೊಲೆಸ್ಟರಾಲ್ ಜಾಸ್ತಿಯಾಗಿ ಹೃದಯ ಬಡಿತ ಮತ್ತು ವೇದನೆಗೆ ಬಹಳಷ್ಟು ಕಾರಣವಾಗುತ್ತದೆ. ಆದ್ದರಿಂದ ನಮ್ಮ ಪೂರ್ವಿಕರು ಬಹಳ ಮಾರ್ಮಿಕವಾಗಿ ತುಳಸಿ ಪೂಜೆ ಮತ್ತು ತುಳಸಿ ಸೇವನೆಯನ್ನು ನಮ್ಮದೈನಂದಿನ ಕಾರ್ಯಗಳಲ್ಲಿ ಬಳಸಲು ಸೂಚಿಸಿದ್ದಾರೆ. ಯಾವ ತೀರ್ಥ ಪ್ರಸಾದವೇ ಇರಲಿ, ಅದರಲ್ಲಿ ತುಳಸಿ ಇದ್ದೇ ಇರುತ್ತೇ. ತುಳಸಿ ಅರ್ಚನೆ ಪ್ರತಿನಿತ್ಯದ ಸಂಪ್ರದಾಯ. ಅರ್ಚನೆಯ ಬಳಿಕ, ನೇವೇದ್ಯಕ್ಕೆ ತುಳಸಿ ದಳಗಳನ್ನು ಹಾಕಲೇಬೇಕು. ಸ್ವಲ್ಪ ಖರ್ಚಿನ ಸೇವೆಯಿಂದ ಅತಿ ಹೇಚ್ಚಿನ ಸೇವಾಕರ್ತರು ಯಾರೇ ಆಗಿರಲಿ ಅವರಿಗೆ ಪ್ರಸಾದದ ರೂಪದಲ್ಲಿ ತುಳಸಿ ಸೇವನೆ ಕಡ್ಡಾಯ. ಉಡುಪಿ ಮತ್ತು ಪೂರಿ ಜಗನ್ನಾಥ ಸ್ಥಳದಲ್ಲಿ ತುಳಸಿ ಬೀಜವನ್ನೇ ಪ್ರಸಾದದಲ್ಲಿ ಸೇರಿಸಿರುತ್ತಾರೆ. ಇದರೆಲ್ಲದರ ಮುಖ್ಯ ವಿಷಯ ಮಾನವ ತನ್ನ ಬದುಕಿನ ಉದ್ದಕ್ಕೂ ಯಾವ ತರಹದಲ್ಲಾದರೂ ತುಳಸಿ ಸೇವನೆಯಾಗಿ ಆ ಕ್ರೋಮಿಯಂ ಧಾತು ಅವನ ದೇಹದಲ್ಲಿ ಸೇರಿ ಅವನಿಗೆ ಆಗಬಹುದಾದ ರಕ್ತದಲ್ಲಿನ ಕೊಲೆಸ್ಟರಾಲ್ ಏರುಪೇರು ತಡೆಗಟ್ಟಲಿಯೆಂದು. ಇದರಿಂದ ಅವನ ಅತಿ ಮುಖ್ಯವಾದ ಹೃದಯ ಬಡಿತವೂ ಹತೋಟಿಗೆ ಬರುವುದು. ಈಗಲಾದರೂ ಇಷ್ಟು ತಿಳಿದ ಮೇಲೆ ನಾವು ನಮ್ಮ ಹಿಂದಿನವರು ಹಾಕಿರುವ ರೀತಿ, ನೀತಿಗಳಿಗೆ ಪ್ರಶಂಸೆ ಮಾಡಲೇಬೇಕು.

ಹಿಂದೂ ಸಂಪ್ರದಾಯದಲ್ಲಿ ತುಳಸಿ ಪೂಜೆ ಮಾಡಿ ಅದರ ನಿರ್ಮಾಲ್ಯವನ್ನು ಕಿವಿಯಲ್ಲಿ ಇಟ್ಟುಕೊಳ್ಳುತ್ತಾನೆ. ಅದರಿಂದ ಚರ್ಮರೋಗ ಮತ್ತು ಕಿವಿಯ ಬಾಧೆಗಳು ದೂರವಾಗುತ್ತದೆ. ಇದನ್ನೇ ಪುರಂದರದಾಸರು ತುಳಸಿ ಸ್ಪರ್ಷನದಿಂದ ದೇಹ ಪಾವನವೆಂದು ತಮ್ಮ ಕೃತಿಯಲ್ಲಿ ತಿಳಿಸಿದ್ದಾರೆ. ಅದನ್ನು ದಿನಾ ಮೂಗಿನಿಂದ ಗ್ರಹಣ ಮಾಡಿದವನಿಗೆ, ನೆಗಡಿಯ ಬಾಧೆಯಿಲ್ಲ, ತುಳಸಿ ಮಾಲೆ ಧರಿಸಿದವನಿಗೆ ಕೀಟ ಕ್ರಿಮಾಣುಗಳ ರೋಗವಿಲ್ಲ. ಅದರ ಸೇವನೆಯಿಂದ ಹೃದಯ ಬಡಿತದಲ್ಲಿ ಸಮತೋಲನ ಇಟ್ಟುವೈದ್ಯಕೀಯ ಸಂಪತ್ತು ಅಡಗಿದೆ ಈ ತುಳಸಿಯಲ್ಲಿ.

ಅದರಿಂದಲೇ ಶ್ರೀ ಪುರಂದರ ದಾಸರು :

"ಬೃಂದಾವನವೇ ಮಂದಿರವಾಗಿಹ
ಇಂದಿರೆ ಶ್ರೀ ತುಳಸಿ
ತುಳಸಿಯ ವನದಲಿ ಹರಿ
ಇಹನೆಂಬುದು ಶ್ರುತಿ ಸಾರುತಿದೆ ಕೇಳಿ"

ಎಂದು ಹೇಳಿದ್ದಾರೆ.

ಇಷ್ಟಲ್ಲದೆ ಇದನ್ನು ಧನ್ವಂತ್ರಿಯ ಕೊಡುಗೆಯೆಂದು ಪುರಾಣಗಳು ಹೇಳುತ್ತಿವೆ. ಅದು ನಿಜವಾಗಿಯೂ ಒಪ್ಪುವ ವಿಷಯವೇ ಸರಿ.

ಈಗಿನ ಪರಿಸ್ಥಿತಿಯಲ್ಲಿ ನಮ್ಮ ಮನೆಗಳಲ್ಲಿ ಬೆಳಸಲು ಸ್ಥಳವಿಲ್ಲ, ಬೆಳೆಯಲಿಕ್ಕೆ ಅದು ಹಿತ್ತಲಗಿಡ ಮದ್ದಲ್ಲ ಎಂಬ ಭ್ರಾಂತಿ ಮತ್ತು ಹಳೇ ಸಂಪ್ರದಾಯದ ಗಿಡವೆಂಬ ಮನೋಭಾವ ನಮ್ಮಲ್ಲಿ. ಈಗಿರುವ ಪ್ರತಿ ಮನೆಯಲ್ಲಿ ಒಂದು ಟಿ.ವಿ. ಆನ್‌ಟಿನಾ ಇದೆಯೋ ಹೊರತು, ತುಳಸಿ ಗಿಡವಿಲ್ಲ. ಉತ್ಥಾನದ್ವಾದಶಿ ದಿವಸ ಮಾರು ಕಟ್ಟೆಯಲ್ಲಿ ಖರೀದಿಗೆ ತಂದು ಒಂದು ದಿನದ ಹಬ್ಬ ಮಾಡಿ ಮತ್ತೆ ಬರುವ ವರುಷದವರೆವಿಗೂ ಅದು ನಮ್ಮ ಗಮನಕ್ಕೆ ಬರದ ಒಂದು ಹಿಂದೂ ಸಂಪ್ರದಾಯದ ಗಿಡವಾಗಿದೆ.

ಈಗಲಾದರೂ ಇದರ ಇಷ್ಟು ಮಾಹಿತಿ ತಿಳಿದ ಮೇಲೆ ಇದು ದೇವರು ನಮಗೆ ಕೊಟ್ಟಿರುವ ಕೊಡುಗೆ ಎಂದು ತಿಳಿದು ಪೂಜಿಸಿ, ಪ್ರತಿ ನಿತ್ಯ ಉಪಯೋಗಿಸಿದಲ್ಲಿ ನಾವು ಮಾನವರಾಗಿರುವುದಕ್ಕೆ ಇಹದಲ್ಲಿ ಸುಖವನ್ನು ಪರದಲ್ಲಿ ಯಶಸ್ಸನ್ನು ಪಡೆಯುತ್ತೇವೆ. ★

# ಗೋಪಾಲ ವಿಂಶತಿ

---ಸಿ. ಗೋವಿಂದಾಚಾರ್.

ವಿಂಶತಿ ಎಂದರೆ ಇಪ್ಪತ್ತು ಪದ್ಯಗಳುಳ್ಳ ಸ್ತೋತ್ರ. ಗೋಪಾಲ ವಿಂಶತಿ ಎಂಬ ಕೃತಿಯನ್ನು ದೇಶಿಕರು ತಿರುವಹೀಂದ್ರಪುರದ ಶ್ರೀಕೃಷ್ಣ ಸನ್ನಿಧಿಯ ಮುಂದೆ ರಚಿಸಿರುತ್ತಾರೆ. ಈ ಸ್ತೋತ್ರಕ್ಕೆ ಸರ್ವಾಕರ್ಷಕನಾದ ಗೋಪಾಲ ಹಾಗೂ ಗೋಪಾಲತ್ವ ಪ್ರಧಾನ ವಿಷಯ. ದಿವ್ಯವೇಣುರಸಿಕ, ವಲ್ಲವೀವಲ್ಲಭ, ನಾಥ, ಕಿಶೋರ, ಕುಮಾರ, ಗೋಪಿಜಾರ ಎಂದು ವರ್ಣಿಸಿ ಮನಸಾರೆ ಸ್ತುತಿಸಿದ್ದಾರೆ. ಕೃಷ್ಣಾವತಾರ, ಲೀಲೆ, ಮೋಹಕ ಸ್ವರೂಪವನ್ನು ತಾವು ನೋಡಿ ಅನುಭವಿಸಿದಂತೆ ಚಿತ್ರಿಸಿಕೊಂಡು ಪ್ರತಿ ಪದ್ಯದಲ್ಲಿ ಸಾಮಾನ್ಯ ಮತ್ತು ಧ್ವನ್ಯರ್ಥಗಳನ್ನು ಕೊಟ್ಟು, ಸಾಧುಪರಿತ್ರಾಣ ಯಾವ ರೀತಿಯಲ್ಲಿ ಅನುಭಾವ್ಯವಾಗಿದೆ ಎಂಬುದನ್ನು ಹೇಳಿ, ಪರತತ್ವ ನಿರ್ಣಯವನ್ನು ಮಾಡಿ ೨೧ ನೇ ಪದ್ಯದಲ್ಲಿ ಕೃಷ್ಣಭಕ್ತಿರಸಾಯನದ ಫಲಶ್ರುತಿಯನ್ನು ಹೇಳಿದ್ದಾರೆ. ಮಂತ್ರಶಾಸ್ತ್ರದ ಮಹಾನಿಧಿಗಳಲ್ಲೊಂದಾದ ಗೋಪಾಲಚಕ್ರದ ಯೋಗ ರಹಸ್ಯವನ್ನು ಎರಡನೆ ಪದ್ಯದಲ್ಲಿ ವಿವರಿಸಿದ್ದಾರೆ.

ಕೃಷ್ಣಾವತಾರದ ಬಗ್ಗೆ ದೇಶಿಕರಿಗಿರುವ ವ್ಯಾಮೋಹ ಈ ಸ್ತೋತ್ರದಿಂದ ತಿಳಿದುಬರುತ್ತೆ. ಕೃಷ್ಣ ಎಂಬ ಶಬ್ದ ವ್ಯಾಪಕವಾದ್ದು. ಭಗವದವತಾರಗಳು ಈ ಹೆಸರಿನಿಂದ ವ್ಯವಹರಿಸಲ್ಪಟ್ಟಿವೆ. 'ಉಧೃತಾಸಿ, ವರಾಹೇಣ ಕೃಷ್ಣೇನ ಶತಬಾಹುನ' ಎಂದು ಶ್ರುತಿಯು ವರಾಹಮೂರ್ತಿಯನ್ನು 'ಕೃಷ್ಣ' ಎಂದು ಕರೆದಿದೆ. "ಸತ್ವಾಸಕ್ತಮತಿಃ ಕೃಷ್ಣೇ ದಶ್ಯಮಾನೋ ಮಹೋರಗೈಃ" ಎಂದು ಪರಾಶರ ಮಹರ್ಷಿ ನೃಸಿಂಹನನ್ನು ಕೃಷ್ಣ ಎಂದು ಕರೆದಿದ್ದಾರೆ. ಪ್ರಹ್ಲಾದಗೊಲಿದ ಶ್ರೀಕೃಷ್ಣ ಎಂದು ದಾಸವರೇಣ್ಯರು ಹೇಳಿದ್ದಾರೆ. ಆಕರ್ಷಿಸಲ್ಪಡದವರು ಯಾರೂ ಇಲ್ಲ. ಕರ್ಷಣವು ಅವನ ಅಸಾಧಾರಣವಾದ ಗುಣ. ಭಗವದವತಾರವಾದ ಕಾಲವೇ ಜಯಂತಿ. ಈ ಪದ ಬೇರೆಡೆಗಳಲ್ಲಿ ಔಪಚಾರಿಕ. ಆಶ್ರಿತರ ಮೋಕ್ಷಕ್ಕಾಗಿ ಕೇವಲ ಕರುಣೆಯಿಂದಲೇ ಅವತಾರ ಪುರುಷನಾಗಿ ಬಂದಿರುತ್ತಾನೆ.

'ಗೋಪಾಲ' ಎಂಬುದು ಕೃಷ್ಣಶಬ್ದದ ಪರ್ಯಾಯ. ಗೋ ಎಂದರೆ : ಎ) ವಾಗ್ರೂಪವಾದ ವೇದ, ಬಿ) ಭೂಮಿ. ಇವೆರಡನ್ನು ಸದಾ ಪಾಲಿಸುವವನು ಗೋಪಾಲ - ವಾಕ್ಪಾಲಕ. ಚೇತನರ ಉದ್ಧಾರಕ್ಕಾಗಿಯೇ ಮಧುರೆಯಲ್ಲಿ ಅವತರಿಸಿ ಗೋಕುಲದಲ್ಲಿ ಯಶೋದೆ - ನಂದರ ಮುದ್ದುಕುವರನಾಗಿ ಬೆಳೆಯುತ್ತಾ ಗೋಪಾಲನಾಗಿ ಪ್ರಸಿದ್ಧನಾದನು. ಗೋಕುಲದಲ್ಲಿ ಅವನಾಡಿದ ಲೀಲೆಗಳು ಅದ್ಭುತ ಹಾಗೂ ಅಮಾನುಷವಾಗಿದ್ದು ಅವು ಎಲ್ಲರನ್ನು ಆಕರ್ಷಿಸಿದುವು. ಪರಬ್ರಹ್ಮವು ಕಿಶೋರ



ಭಾವವನ್ನು ಹೊಂದಿದೆ ಎಂದು ದೇಶಿಕರು ಹೇಳುತ್ತಾರೆ. 'ವಂದೇ' ಎಂಬ ಪದಕ್ಕೆ ಮೂರು ಅರ್ಥಗಳನ್ನು ಹೇಳುತ್ತಾರೆ. ೧) ಅಂಜಲಿಯನ್ನು ನಿರೀಕ್ಷಿಸುವ ಗೋಪಾಲ, ೨) ಅವನು ಅಂಜಲಿಯಾಚಕನಾಗಬಾರದೆಂದು ಭಾವಿಸಿ "ಅವನು ಯಾಚಿಸುವುದಕ್ಕೆ ಮುಂಚೆ ನಾನೆ ಮೊದಲು ವಂದಿಸುತ್ತೇನೆ". ೩) ಶರಣಾಗತಿ ಸೂಚಕ. ವನಚರವಾದ ಧಾಮ-ಗೋಕುಲವನ್ನು ದೇಶಿಕರು 'ತೇಜಸ್ಸು' ಎಂದು ಕರೆದಿದ್ದಾರೆ. ಇಲ್ಲಿ ಗೋಪಾಲನು ವನಮಾಲಾಧರನಾಗಿರುತ್ತಾನೆ. "ಪ್ರಪನ್ನರಿಗೆಲ್ಲಾ ನನ್ನ ರಕ್ಷಣೆ ಇದೆ" ಎಂದು ಸಾರುವಂತೆ ಈ ಬಾಲಕ ಬೃಂದಾವನದಲ್ಲೆಲ್ಲಾ ಸಂಚರಿಸಿದ. ಜಯಂತಿ ಸಂಭವವೂ ವೈಜಯಂತಿ ಭೂಷಣವೂ ಆದ ಧಾಮವನ್ನು ವಂದಿಸುತ್ತೇನೆ ಎಂದು ಆಚಾರ್ಯರು ವರ್ಣಿಸುತ್ತಾರೆ. (ಗೋ.ವಿಂ.೧)

## ಕೃಷ್ಣಲೀಲೆ :

ಪೂತನಿ ವೃತ್ತಾಂತವನ್ನು ದೇಶಿಕರು 'ಮಾಯೆ, ನಿಜವಾದ ಜನನಿ ಅಲ್ಲ ಮೋಸದವಳು -- ಕುಹನಾ ಜನನಿ' (ಗೋ.ವಿಂ.೩) ಎಂದು ಹೇಳಿದ್ದಾರೆ.

'ಸ್ತನ್ಯಂ ತದ್ವಿಷ ಸಂಮಿಶ್ರಂ ರಸ್ಯಮಾಸೀತ್ ಜಗದ್ಗುರೋ' -- ಹರಿವಂಶ. ನಮ್ಮ ಕರ್ಮಗಳಿಂದ ಪ್ರಕೃತಿಯ ಸ್ತನ್ಯ ವಿಷಪೂರಿತವಾಗಿರುತ್ತೆ. ಜಗದ್ಗುರು ಕೃಷ್ಣನಿಗೆ ಅದು ರಸವಾಗಿರುತ್ತೆ. ಮೃತ್ಯು ದೇವತೆಯೇ ಇವನಿಗೆ ಊಟಕ್ಕೆ ವ್ಯಂಜನವೆಂದು ವೇದ ಹೇಳಿರುವಾಗ ಇನ್ನು ಪೂತನಿಯ ವಿಷ ರಸವಾಗುವುದರಲ್ಲಿ ಆಶ್ಚರ್ಯವೇನಿದೆ. ಮಾಯಾ ಪ್ರಕೃತಿಯ ಪ್ರಾಣವನ್ನು ಹೀರುವುದರಿಂದಲೇ ಮೋಕ್ಷದಾನದ ಮೂಲಕ ಚೇತನ ರಕ್ಷಣೆಯಾಗುತ್ತೆ. ಈ ಮಾಯಾ ವಧೆಯಿಂದ ಗೋಪಾಲ ಶಿಶುವು ಸಾಮಾನ್ಯವಲ್ಲ ಪರಮ ಪುರುಷನೇ ಎಂದು ತೂಪ್ಪಿಲ್ ಅಮ್ಮನ್ ಪರತತ್ವವನ್ನು ಸುಂದರವಾಗಿ ವರ್ಣಿಸಿರುತ್ತಾರೆ. ಬೇರೆ ಅಸುರ ನಿರಸನ ವೃತ್ತಾಂತವಾವುದೂ ಈ ಕೃತಿಯಲ್ಲಿ ಕೀರ್ತಿತವಾಗಿಲ್ಲ.

ಭಗವಂತನು ಚೇತನರ ರಕ್ಷಾದೀಕ್ಷಿತ. ಚೇತನರ ರಕ್ಷಣೆ ಅವನಿಗೆ ಒಂದು ಯಾಗವಿದ್ದಂತೆ. ಈ ರಕ್ಷಿ ಆಗಬೇಕಾದರೆ ಚೇತನರ ಹೃದಯ ಹರಣವಾಗಬೇಕು. ಇದಕ್ಕಾಗಿ ಚೌರ್ಯನಾಟ್ಯ. ಇದರ ಪ್ರಯೋಜನ ನವನೀತಲಾಭ. ನಾಟ್ಯದ ಆವಿರ್ಭಾವವನ್ನು ಆಚಾರ್ಯರು ಬಯಸುತ್ತಾರೆ (ಆವಿರ್ಭವತ್ವಂ - ೪)

ಭಕ್ತರ ಮೃದುವಾದ ಚಿತ್ತವೇ ನವನೀತ. ಭಕ್ತರ ನವನೀತ ದಂತಹ ಹೃದಯವನ್ನು ಅಥವ ಮುಮುಕ್ಷುಗಳಾದ ಗೋಪಿಯರ ನವನೀತ ದಂತಹ ಹೃದಯವನ್ನು ಭಗವಂತ ಕದಿಯುವನು ಎಂಬ ಧ್ವನ್ಯರ್ಥ. ಯಾವಾಗ ಭಗವಂತನ ವಿಷಯದಲ್ಲಿ ಚಿತ್ತ ಕರಗುವುದೋ ಆಗಲೇ ಅವನು ಅದನ್ನು ಕೃಪೆಯಿಂದ ಸ್ವೀಕರಿಸಿ ತನ್ನದನ್ನಾಗಿ ಮಾಡಿಕೊಳ್ಳು

ವೇದಾಂತ ದೇಶಿಕರ ಪ್ರತಿಭೆ ಅಗಾಧವಾದದ್ದು. ಅವರಿಗೆ ಕವಿ, ತಾರ್ಕಿಕ ಕೇಸರಿ ಎಂಬ ಹೆಸರು. ಅವರಿಗೆ ಭಗವಂತನ ಬಗ್ಗೆ ಅನುಪಮ ಭಕ್ತಿ. ಅವರು ಬರೆದದ್ದು ಅನೇಕ. ಅವುಗಳಲ್ಲಿ ಗೋಪಾಲವಿಂಶತಿಯೂ ಒಂದು. ಅದರ ಅಂತರಾರ್ಥವನ್ನು ಇಲ್ಲಿ ಲೇಖಕರು ವಿವರಿಸಿದ್ದಾರೆ. ಓದುಗರ ಅವಗಾಹನೆಗಾಗಿ ಗೋಪಾಲವಿಂಶತಿಯನ್ನೂ ಜೊತೆಗೂಡಿಸಲಾಗಿದೆ.

# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಆಗಸ್ಟ್ 1995

ಆಗಸ್ಟ್ ತಿಂಗಳಿನಲ್ಲಿ ವಿನಾಯಕ ವ್ರತವೂ, ಶ್ರೀಕೃಷ್ಣಾಷ್ಟಮಿಯೂ, ವರಲಕ್ಷ್ಮೀವ್ರತವೂ ಭಾರತದ ಎಲ್ಲಕಡೆ ಆಚರಿಸಲಾಗುತ್ತದೆ. ಈ ಹರಿದಿನಗಳಲ್ಲಿ ಸಪ್ತಗಿರಿಯನ್ನು ಕಾಲಕ್ಕೆ ತಕ್ಕಂತಹ ರಚನೆಗಳಿಂದ ಪರಿಪುಷ್ಟಿಗೊಳಿಸಲು ಪ್ರಯತ್ನಿಸಲಾಗಿದೆ. ಪ್ರಕಟವಾಗುವ ಲೇಖನಗಳಲ್ಲಿ ಪ್ರಮುಖವಾದುವೆಂದರೆ--

**ಸಂಗೀತದಲ್ಲಿ ಗಣೇಶ :**

ಎಲ್ಲಕ್ಕೂಮೊದಲು ಗಣೇಶ ಸ್ತುತಿ ಮಾಡುತ್ತೇವೆ. ಅದು ಸಂಗೀತವೇ ಹೌದು, ಹಲವಾರು ಗಣೇಶ ಸ್ತೋತ್ರಗಳ ತಾಳ ರಾಗ ವಿವರಣೆಯೊಡನೆ ಗಣಪ ವಂದನೆ ಮಾಡಿ ನಡೆಯುತ್ತಾರೆ - ಬೆಂಗಳೂರಿನ ಇಂಜನೀಯರ್ ಶ್ರೀ ಎಂ. ಸಿ. ನರಸಿಂಹನ್.

**ಗಣಪತಿಯ ಅವತಾರ :**

ಗಣಪತಿಯ ರೂಪಗಳು ಹಲವು ಹನ್ನೊಂದು. ಯುಗಯುಗಗಳಲ್ಲಿ ಬೇರೆ ಬೇರೆ ರೀತಿಯಲ್ಲಿ ಅವನ ಅವತಾರ. ಅದರ ವಿವರವನ್ನು ಒದಗಿಸುತ್ತಾರೆ ಕಾರವಾರದ ವಿದ್ವಾಂಸ ಶ್ರೀ ಅನಂತಚಿಂತಾಮಣಿ ಜ್ಯೋತಿಷೀ.

**ಭ್ರಮರ ಗೀತೆಯಲ್ಲಿ ಶ್ರೀಕೃಷ್ಣ :**

ಭಾಗವದ ಹತ್ತನೇ ಸ್ಕಂಧದಲ್ಲಿ ಉದ್ಧವ ಕೃಷ್ಣದೂತನಾಗಿ ಮಧುರೆಯಿಂದ ಗೋಕುಲಕ್ಕೆ ಕ್ಷೇಮ ಸಮಾಚಾರದ ವಾರ್ತೆಗಾಗಿ ಬಂದಾಗ ಅಲ್ಲಿನ ಗೋಪಿಯರ ಹೃದಯದಾಳದ ಮಾತುಗಳೇ - ಭ್ರಮರಗೀತೆ. ಅದನ್ನು ವಿವರಿಸಿದ್ದಾರೆ ಮಾಲೂರಿನ ಉಪನ್ಯಾಸಕ ಶ್ರೀ ಕೆ. ಆರ್. ಗೋಪಾಲಕೃಷ್ಣ.

**ಶ್ರೀ ರಾಘವೇಂದ್ರಸ್ವಾಮಿಗಳು :**

ಗುರುರಾಯರ ಆರಾಧನೆಯ ಪ್ರಯುಕ್ತ ಅವರ ವ್ಯಕ್ತಿತ್ವ, ಸಾಹಿತ್ಯಗಳ ಸ್ಮರಣೆ, ಭಕ್ತಿಭಾವ ಭರಿತ ಲೇಖನದ ಕರ್ತೃ ಹೈದರಾಬಾದಿನ ಉಪಾಧ್ಯಾಯರಾದ ಶ್ರೀ ಎಂ. ಜಿ. ಶ್ರೀರಾಮಾಚಾರ್ಯರು.

**ಶ್ರೀಕೃಷ್ಣ ರಾಯಭಾರ :**

ಮಹಾಭಾರತದ ಮುಖ್ಯವಾದ ಘಟ್ಟ - ಕೌರವ ಪಾಂಡವ ಯುದ್ಧದ ಮುನ್ನ ನಡೆಯುವ ವಿಫಲಸಂಧಿಯ ನರನಾಟಕ ಸೂತ್ರಧಾರಿ ಶ್ರೀಕೃಷ್ಣನ ಅಂತರಂಗವನ್ನು ತೆರೆದು ತೋರಿಸುತ್ತಾರೆ - ಸಂತ ಹರಿಹರಾನಂದ ಸರಸ್ವತಿ ಸ್ವಾಮಿಜೀ.

**ಸಂತರು ಕಂಡ ಕೃಷ್ಣ :**

ಕನ್ನಡದ ಹರಿದಾಸರಿಗೆ ಉಡುಪಿಯ ಕೃಷ್ಣ ಬಹು ಆಪ್ತ; ಅವನನ್ನು ಕೀರ್ತಿಸದ ನಾಲಗೆಯೂ ಉಂಟೇ ಎಂಬಷ್ಟು ಹತ್ತಿರ. ಹರಿದಾಸರ ಎದೆಯಲ್ಲಿ ಮನೆಮಾಡಿದವನ ವಿವಿಧ ಭಂಗಿಗಳ ವಿವರಣೆಯೇ ಶ್ರೀ ಎಸ್. ಕೆ. ಆಚಾರ್ಯರ ಲೇಖನ.

ಜೊತೆಗೇ ಮತ್ತೂ ಹಲವು ಹೊಸ ಬಣ್ಣ ಹೊತ್ತು ಹೊರಬರುವ ಸಪ್ತಗಿರಿಯನ್ನು ಸ್ವಾಗತಿಸಿ. ನೀವೂ ಓದಿ, ನಿಮ್ಮವರಿಗೂ ಓದಲು ಕೊಡಿರಿ.

ವನು. "ಗೋಪಿಮನಾಂಸಿ ನವನೀತ ಮುತಾಮುಮೋಷಿ" ಎಂದು ಶ್ರೀವತ್ಸಾಂಕಮಿಶ್ರರು ಹೇಳುವರು. ಭಕ್ತರ ಮನಸೇ ಬೆಣ್ಣೆ, ಶರೀರವೇ ಮಡಕೆ. ಆ ಮನಸ್ಸನ್ನು ನನಗೆ ಕೊಡಿರೆಂದು ಕೇಳುವ ನಾಟ್ಯ. ಬಲಗೈಯಲ್ಲಿ ಬೆಣ್ಣೆ, ಬಲಗಾಲನ್ನು ಬಾಗಿಸಿಕೊಂಡು ಮೊಸರು ಕಡೆತದ ಶಬ್ದಕ್ಕೆ ಸರಿಯಾಗಿ ಕುಣಿಯುವನು. ಕುಣಿಯುವಾಗ ಆಭರಣಗಳು ಶಬ್ದಮಾಡುವುದನ್ನು ಪೆರಿಯಾಳ್ವಾರರು 'ಶೆಂಗಿಲಿಕ್ಕೈ' ಎಂದು ಹಾಡಿದ್ದಾರೆ. ಮೊಣಕೈವರೆಗೂ ಬೆಣ್ಣೆ ನೆಕ್ಕಬಹುದೆಂದು ಆಸೆ ಪಟ್ಟು ಶ್ರೀಕೃಷ್ಣನು ಬೆಣ್ಣೆ ಕದಿಯುವಾಗ ಪಾತ್ರೆಯ ಅಡಿಯವರೆಗೂ ಕೈಹಾಕುತ್ತಿದ್ದ. 'ದಧಿರವ್ಯೆ ಯತ್ತಾಂಡವ ಶಿಕ್ಷಿತಂ' ಎಂದು ಪರಾಶರ ಭಟ್ಟರು ಪಾದಗಳ ಕುಣಿತವನ್ನು ವರ್ಣಿಸಿದ್ದಾರೆ. ತಾಯಂದಿರ ಗಮನವನ್ನು ಬೇರೆಡೆ ತಿರುಗಿಸಿ ತಾನು ಒಳಗೆ ಹೋಗಿ ಕದಿಯುತ್ತಿದ್ದ. ಮಡಕೆಯಲ್ಲೇಕೆ ಕೈಹಾಕುತ್ತೀಯ ಎಂದು ಗದರಿಸಿದಾಗ "ಇಲ್ಲಮ್ಮ ಕರು ಕಳುವಾಗಿದೆ ಎಂದು ಹೇಳಿದೆಯಲ್ಲಾ. ಇಲ್ಲೇನಾದರೂ ಇದೆಯೋ ಎಂದು ಹುಡುಕುತಿದ್ದೇನೆ" ಎಂದು ಉತ್ತರಿಸಿದ (ಲೀಲಾಶುಕರ ಕೃಷ್ಣಕರ್ಣಾಮೃತದಿಂದ) ನಾಟ್ಯವಾದ ಮೇಲೆ ಇನ್ನಷ್ಟು ನವನೀತ ತಿನ್ನಲು ನಾಟ್ಯವಾಡಿದ, ಬೇಡಿದ ದೊರಕಲಿಲ್ಲ. ದೀನನಾಗಿ ತಾಯಿಯನ್ನು ಬೇಡಿದ ದೊರಕಲಿಲ್ಲ. ಇದು ಪ್ರಾಕೃತ ಶಿಶುವೆಂದು ಭಾವಿಸಿ ಹೆಚ್ಚು ನವನೀತ ತಿಂದರೆ ಎಲ್ಲಿ ಅಸ್ವಸ್ಥವಾಗುವುದೋ ಎಂದು ತಾಯಿ ಹೆದರಿದಳು. ಇನಷ್ಟು ಕುಣಿದ ದೊರಕಲಿಲ್ಲ. ಕದ್ದುತಿನ್ನುವುದು ಅನಿವಾರ್ಯವಾಗಿ 'ಹರ್ತುಕುಂಭೇವಿನಿಹಿತಕರ'(ಗೋವಿಂ-೫)ಎಂದು ಮಡಕೆಯೊಳಗೆ ಕೈಹಾಕಿದ. ಇವನು ಸೂರ್ಯನಿಗೂ ಸೂರ್ಯನಾದ್ದರಿಂದ ತನ್ನ ಕರ (ಕಿರಣ) ದಿಂದ ನಮ್ಮ ನವನೀತದಲ್ಲಿ ಪ್ರಸರಿಸಿ ಅದನ್ನು ಕರಗಿಸುವನು. ಧರ್ಮ ಸೇತುವಾದ ಭಗವಂತನು ಚೌರ್ಯದಲ್ಲಿ ತೊಡಗಬಹುದೇ ಎಂಬ ಪ್ರಶ್ನೆಗೆ ದೇಶಿಕರು "ಆಶ್ರಿತರ ದೋಷ ನಿವಾರಣೆಗಾಗಿ ತಾನು ಚೋರನಾದ. ಸರ್ವೇಶ್ವರನಾದ್ದರಿಂದ ಚೌರ್ಯದೋಷ ತಾಗುವುದಿಲ್ಲ" ಎಂದು ಉತ್ತರಿಸಿದ್ದಾರೆ. ಇವನು ಕದಿಯುತ್ತಿದ್ದುದನ್ನು ಕಂಡ ಯಶೋದೆ ಕಟ್ಟಿ ಹಾಕಲು ರೋಷದಿಂದ ಧಾವಿಸಿದಳು. ಇವನಿಗೆ ಕಾಲು ನಡುಕ ಉಂಟಾಯಿತು. ಎರಡು ಕಣ್ಣುಗಳನ್ನು ಮುಚ್ಚಿಕೊಂಡು ಓಡುವುದೋ ನಿಲ್ಲುವುದೋ ಎಂಬ ಉಭಯ ಸಂಕಟಕ್ಕೆ ಸಿಕ್ಕಿ ಮಾತೆಗೆ ಮಣಿದ. ತಾಯಿ ಹೆದರಿಕೆ ಇಲ್ಲಿ ಅವನಿಗೆ ಒಂದು ವಿಘ್ನದಂತೆ ಕಂಡಿತು. ಭಯಪಟ್ಟವನಂತೆ ಓಡುವಂತೆ ನಾಟಕವಾಡಿದ. ಆದರೆ ಬೆಣ್ಣೆ ಚಾಪಲ್ಯದಿಂದ ಒಂದು ಕಾಲು ಒಳಗೇ ಇತ್ತು. ಸಾಮಾನ್ಯ ಅಸಹಾಯಕ

# ಶ್ರೀ ಗೋಪಾಲವಿಂಶತಿ

ಶ್ರೀಮಾನ್ ವೇಂಕಟನಾಥಾರ್ಯಃ ಕವಿತಾರ್ಕಿಕ ಕೇಸರೀ
ವೇದಾಂತಾಚಾರ್ಯವರ್ಯೋ ಮೇ ಸನ್ನಿಧತ್ತಾಂ ಸದಾಹೃದಿ ||

ವಂದೇ ಬೃಂದಾವನಚರಂ ವಲ್ಲವೀಜನ ವಲ್ಲಭಂ
ಜಯಂತೀ ಸಂಭವಂ ಧಾಮ ವೈಜಯಂತೀ ವಿಭೂಷಣಂ -1-

ವಾಚಂ ನಿಜಾಂಕ ರಸಿಕಾಂ ಪ್ರಸಮೀಕ್ಷಮಾಣಃ
ವಕ್ತ್ರಾರವಿಂದ ವಿನಿವೇಶಿತ ಪಾಂಚಜನ್ಯಃ
ವರ್ಣತ್ರಿಕೋಣ ರುಚಿರೇ ವರಪುಂಡರೀಕೇ
ಬದ್ಧಾಸನೋ ಜಯತಿ ವಲ್ಲವ ಚಕ್ರವರ್ತೀ -2-

ಆಮ್ನಾಯ ಗಂಧ ರುಚಿರ ಸ್ಫುರಿತಾಧರೋಷ್ಠಂ
ಆಸ್ರಾವಿಲೇ ಕ್ಷಣ ಮನುಕ್ಷಣ ಮಂದಹಾಸಂ
ಗೋಪಾಲ ಡಿಂಭ ವಪುಷಂ ಕುಹನಾ ಜನನ್ಯಾಃ
ಪ್ರಾಣಸ್ತ ನಂಧಯಮವೈಮಿ ಪರಂ ಪುಮಾಂಸಂ -3-

ಆವಿರ್ಭವತ್ವ ನಿಭೃತಾಭರಣಂ ಪುರಸ್ತಾತ್
ಆಕುಂಚಿತೈಕ ಚರಣಂ ನಿಭೃತಾನ್ಯ ಪಾದಂ
ದಧ್ನಾ ನಿಮಂಥಮುಖರೇಣ ನಿಬದ್ಧ ತಾಲಂ
ನಾಥಸ್ಯ ನಂದ ಭವನೇ ನವನೀತ ನಾಟ್ಯಂ -4-

ಹರ್ತುಂ ಕುಂಭೇ ವಿನಿಹಿತಕರಃ ಸ್ವಾದುಹೈಯಂಗವೀನಂ
ದೃಷ್ಟ್ವಾದಾಮಗ್ರಹಣ ಚಟುಲಾಂ ಮಾತರಂ ಜಾತರೋಷಾಂ
ಪಾಯಾದೀಷತ್ಪ್ರಚಲಿತಪದೋ ನಾಪ ಗಚ್ಛನ್ನತಿಷ್ಠನ್
ಮಿಥ್ಯಾ ಗೋಪಸ್ಸಪದಿ ನಯನೇ ಮೀಲಯನ್ ವಿಶ್ವಗೋಪ್ತಾ -5-

ವ್ರಜಯೋಷಿದಪಾಂಗ ವೇದನೀಯಂ
ಮಧುರಾಭಾಗ್ಯ ಮನನ್ಯ ಭೋಗ್ಯ ಮೀಡೇ
ವಸುದೇವ ವಧೂಸ್ತನಂಧಯಂ ತತ್
ಕಿಮಪಿ ಬ್ರಹ್ಮ ಕಿಶೋರ ಭಾವಗಮ್ಯಂ -6-

ಪರಿವರ್ತಿತ ಕಂಧರಂ ಭಯೇನ
ಸ್ಮಿತಫುಲ್ಲಾಧರ ಪಲ್ಲವಂ ಸ್ಮರಾಮಿ
ವಿಟಪಿತ್ವ ನಿರಾಸಕಂ ಕಯೋಶ್ಚಿತ್
ವಿಪುಲೋಲೂಖಲಕರ್ಷಕಂ ಕುಮಾರಂ -7-

ನಿಕಟೇಷು ನಿಶಾಮಯಾಮಿ ನಿತ್ಯಂ
ನಿಗಮಾಂತೈರಧುನಾಪಿ ಮೃಗ್ಯಮಾಣಾಂ
ಯಮಲಾರ್ಜುನ ದೃಷ್ಟ ಬಾಲಕೇಲಿಂ
ಯಮುನಾ ಸಾಕ್ಷಿಕ ಯೌವನಂ ಯುವಾನಂ -8-

ಪದವೀಮದವೀಯಸೀಂ ವಿಮುಕ್ತೇಃ
ಅಟವೀಸಂಪದಮಂಬು ವಾಹಯನ್ತೀಂ
ಅರುಣಾಧರ ಸಾಭಿಲಾಷ ವಂಶಾಂ
ಕರುಣಾಂ ಕಾರಣ ಮಾನುಷೀಂ ಭಜಾಮಃ -9-

ಅನಿಮೇಷ ನಿಷೇವಣೀಯ ಮಕ್ಷ್ಣೋಃ
ಅಜಹದ್ಯೌವನ ಮಾವಿರಸ್ತು ಚಿತ್ತೇ
ಕಲಹಾಯಿತ ಕುಂತಳಂ ಕಲಾಪೈಃ
ಕರುಣೋನ್ಮಾದಕ ವಿಭ್ರಮಂ ಮನೋಮೇ -10-

ಅನುಯಾಯಿ ಮನೋಜ್ಞ ವಂಶನಾಳ್ಯೈಃ
ಅವತು ಸ್ಪರ್ಶಿತ ವಲ್ಲವೀ ವಿಮೋಹೈಃ
ಅನಘಸ್ಮಿತ ಶೀತಲೈರಸೌ ಮಾಂ
ಅನುಕಂಪಾ ಸರಿದಂಬುಜೈರಪಾಂಗೈಃ -11-

ಅಧರಾಹಿತ ಚಾರು ವಂಶನಾಳಾಃ
ಮಕುಟಾಲಂಬಿ ಮಯೂರ ಪಿಂಛ ಮಾಲಾಃ
ಹರಿನೀಲ ಶಿಲಾ ವಿಭಂಗನೀಲಾಃ
ಪ್ರತಿಭಾಸ್ಸನ್ತು ಮಮಾಂತಿಮ ಪ್ರಯಾಣೇ -12-

ಅಖಿಲಾನವಲೋಕಯಾಮಿ ಕಾಲಾನ್
ಮಹಿಳಾಧೀನ ಭುಜಾಂತರಸ್ಯ ಯೂನಃ
ಅಭಿಲಾಷಪದಂ ವ್ರಜಾಂಗನಾನಾಂ
ಅಭಿಲಾಪಕ್ರಮದೂರ ಮಾಭಿರೂಪ್ಯಂ -13-

ಹೃದಿ ಮುಗ್ಧ ಶಿಖಂಡ ಮಂಡನೋ
ಲಿಖಿತಃ ಕೇನ ಮಮೈಷ ಶಿಲ್ಪಿನಾ
ಮದನಾತುರ ವಲ್ಲವಾಂಗನಾ
ವದನಾಂಭೋಜ ದಿವಾಕರೋ ಯುವಾ -14-

ಮನಸೇ ಮಹಿತಾಯ ಮೌಲಿನಾ
ವಿನತೇನಾಂಜಲಿ ಮಂಜನತ್ವಿಷೇ
ಕಲಯಾಮಿ ವಿಮುಗ್ಧವಲ್ಲವೀ
ವಲಯಾಭಾಷಿತ ಮುಂಜ ವೇಣವೇ -15-

ಜಯತಿ ಲಲಿತ ವೃತ್ತಿಂ ಶಿಕ್ಷಿತೋ ವಲ್ಲವೀನಾಂ
ಶಿಥಿಲವಲಯ ಸಿಂಜಾ ಶೀತಲೈರ್ಹಸ್ತ ತಾಲೈಃ
ಅಖಿಲ ಭುವನ ರಕ್ಷಾಗೋಪ ವೇಶಸ್ಯ ವಿಷ್ಣೋಃ
ಅಧರಮಣಿ ಸುಧಾಯಾ ಮಂಶವಾನ್ ವಂಶನಾಳಃ -16-

ಚಿತ್ರಾಕಲ್ಪಃ ಶ್ರವಸಿ ಕಲಯನ್ ಲಾಂಗಲೀ ಕರ್ಣಪೂರಂ
ಬರ್ಹೋತ್ತಂಸ ಸ್ಫುರಿತ ಚಿಕುರೋ ಬಂಧುಜೀವಂ ದಧಾನಃ
ಗುಂಜಾಬದ್ಧಾ ಮುರಸಿ ಲಲಿತಾಂ ಧಾರಯನ್ ಹಾರಯಷ್ಟಿಂ
ಗೋಪಸ್ತ್ರೀಣಾಂ ಜಯತಿ ಕಿತವಃ ಕೋಽಪಿ ಕೌಮಾರಹಾರೀ -17-

ಲೀಲಾಯಷ್ಟಿಂ ಕರಕಿಸಲಯೇ ದಕ್ಷಿಣೇ ನ್ಯಸ್ಯ ಧನ್ಯಾಂ
ಅಂಸೇ ದೇವ್ಯಾಃ ಪುಲಕನಿಚಿತೇ ಸನ್ನಿವಿಷ್ಟಾನ್ಯ ಬಾಹುಃ
ಮೇಘಶ್ಯಾಮೋ ಜಯತಿ ಲಲಿತೋ ಮೇಖಲಾದತ್ತ ವೇಣುಃ
ಗುಂಜಾ ಪೀಡಸ್ಫುರಿತ ಚಿಕುರೋ ಗೋಪಕನ್ಯಾ ಭುಜಂಗಃ -18-

ಬಾಲಕನಂತೆ ತಾಯಿಗೆ ಭಯಪಟ್ಟವನಂತೆ ನಟಿಸಿದ. ತನ್ನ ಶೋಚನೀಯ ಸ್ಥಿತಿ ಎಲ್ಲರಿಗೂ ತಿಳಿಯುವಂತೆ ಕಟ್ಟಿಹಾಕಿಸಿಕೊಂಡು ಎಲ್ಲರನ್ನು ಆಕರ್ಷಿಸುವ ನಾಟ್ಯವಾಡಿದ. ಇಂಥಾ ಮನಮೋಹಕ ದೃಶ್ಯವನ್ನು ನಮ್ಮಾಳ್ವಾರರು 'ಎತ್ತಿರಂ' ಎಂದು ಹೇಳಿದ್ದಾರೆ. ಗೋಪಿಯರನ್ನು ಈ ದೃಶ್ಯ ಹೆಚ್ಚು ಆಕರ್ಷಿಸಿತು. ಮೃತ್ಯುದೇವತೆಗೇ ಭಯವನ್ನು ಉಂಟುಮಾಡುವವನು ತಾಯಿಗೆ ಹೆದರುವಂತೆ ನಟಿಸಿದನಲ್ಲಾ ಎಂದು ದೇಶಿಕರು ವಿಸ್ಮಯಪಡುತ್ತಾರೆ. ತಾಯಿಗೆ ಹೆದರುವ ಶಿಶುವಿನ ಸ್ವಭಾವ ಇಲ್ಲಿ ವ್ಯಕ್ತವಾಗುವುದು. ಭಯದಿಂದ ಎರಡೂ ಕಡೆಗಳನ್ನು ನೋಡುವನು. ಒಂದು ಕಡೆ ನಡುಗುವ ತುಟಿಯಿಂದ ಅಳುವನು, ಮತ್ತೊಂದು ಕಡೆ ಮಂದಹಾಸನಗೆ. ಕೃಷ್ಣನ ಅಳುವು ವೇದಕ್ಕೆ ಸಮಾನ ಎಂದು ದೇಶಿಕರು ಕಂಡುಕೊಂಡಿರುತ್ತಾರೆ. ಜ್ಞಾನಿಗಳು ಭಗವಂತನನ್ನು ವೇದವೆಂಬ ಕಣ್ಣುಗಳಿಂದ ನೋಡುವರು. ದಾಮ (ಹಗ್ಗ) ಕಟ್ಟು ಭಗವಂತನ ಕೃಪೆಯಿಂದ ಅನಾಯಾಸವಾಗಿ ಬಿಟ್ಟುಹೋಗುವುದು ಎಂಬುದೇ ಇಲ್ಲಿ ಧ್ವನಿ.

ಗೋಪಿ ವಸ್ತ್ರಾಪಹರಣ ಶರಣಾಗತಿ ಸೂಚಕವಾದ್ದು. ನಾನು ನನ್ನದೆಂಬ ಅಹಂಕಾರವನ್ನು ಅಪಹರಿಸುವುದೇ ವಸ್ತ್ರಾಪಹರಣದ ರಹಸ್ಯ. ಅಂಜಲಿಯಿಂದ ಅನುಪಮವಾಗಿ ಪ್ರಾರ್ಥಿಸಿದರೇನೆ ವಸ್ತ್ರಗಳನ್ನು ಹಿಂದಿರುಗಿಸುವ ಸಂಕಲ್ಪಮಾಡಿದ ಕೃಷ್ಣ. ಕೆಲವರು ಬೇಡಿದರು, ಪ್ರಾರ್ಥಿಸಿದರು, ಕೆಲವರು ಮಂಗಳಾಶಾಸನ ಮಾಡಿದರು. ಇನ್ನೂ ಕೆಲವರು ಇವನ ತಾಯಿಯನ್ನು ನಿಂದಿಸಿದರು, ಕೆಲವರು ಲಜ್ಜೆಯಿಂದ ಮೈಬಾಗಿದರು. ಹೀಗೆ ಬಹು ಪ್ರಾಕಾರದಿಂದ ಪ್ರಾರ್ಥಿಸಿದ್ದನ್ನು 'ಅಂಜಲಿ' ಎಂದು ಕರೆಯುವರು. (ಗೋ.ವಿಂ.೨೦)

ಜಲಕ್ರೀಡೆಯ ವೈಭವಕ್ಕೆ ಆಚಾರ್ಯರು ಮನಸೋತಿದ್ದಾರೆ. ಪಿಚಕಾರಿಯಿಂದ ಜಲವನ್ನು ಎರಚುವುದು, ಹಿಂದಿನಿಂದ ಬಂದು ಕಣ್ಮುಚ್ಚುವುದು ಆಲಂಗಿಸಿಕೊಳ್ಳುವುದು ಒಬ್ಬೊಬ್ಬ ಗೋಪಿಗೂ ಒಬ್ಬೊಬ್ಬ ಕೃಷ್ಣನಾಗಿ ಕಂಡು ರಾಸಕ್ರೀಡೆ ಆಡುವುದು, ಒಬ್ಬಳಿಗಿಂತ ಇನ್ನೊಬ್ಬಳ ತೀವ್ರ 'ಸ್ಪರ್ಧೆ' ಇತ್ಯಾದಿಗಳು - ಮುಕ್ತಾತ್ಮರಿಗೆ ದೊರೆಯುವಂಥಾ ಭಗವದ್ಭೋಗ. ಅಂಥಾ ಭಕ್ತರಿಗೆ 'ಭಕ್ತಿ ಕ್ರೀತೋ ಜನಾರ್ದನ' ಎಂದು ತನ್ನನ್ನೇ ಮಾರಿಕೊಳ್ಳುವನಾಗಿದ್ದಾನೆ.

ಪ್ರತ್ಯಾಲೀಢ ಸ್ಥಿತಿ ಮುಪಗತಾಂ ಪ್ರಾಪ್ತಗಾಢಾಂಗ ಪಾಲಿಂ
ಪಶ್ಚಾದೀಷನ್ಮಿಲಿತ ನಯನಾಂ ಪ್ರೇಯಸೀಂ ಪ್ರೇಕ್ಷಮಾಣಃ
ಭಸ್ತ್ರಾಯಂತ್ರ ಪ್ರಣಿಹಿತಕರೋ ಭಕ್ತ ಜೀವಾತುರವ್ಯಾತ್
ವಾರಿ ಕ್ರೀಡಾ ನಿಬಿಡ ವಸನೋ ವಲ್ಲವೀ ವಲ್ಲಭೋ ನಃ -19-

ವಾಸೋ ಹೃತ್ವಾ ದಿನಕರ ಸುತಾ ಸನ್ನಿಧೌ ವಲ್ಲವೀನಾಂ
ಲೀಲಾಸ್ಮೇರೋ ಜಯತಿ ಲಲಿತಾ ಮಾಸ್ಥಿತಃ ಕುಂದಶಾಖಾಂ
ಸವ್ರೀಡಾಭಿಸ್ತದನು ವಸನೇ ತಾಭಿರಭ್ಯರ್ಥ್ಯಮಾನೇ
ಕಾಮೀ ಕಶ್ಚಿತ್ಕರ ಮಲಯೋರಂಜಲಿಂ ಯಾಚಮಾನಃ -20-

ಇತ್ಯನನ್ಯಮನಸಾ ವಿನಿರ್ಮಿತಾ ವೇಂಕಟೇಶ ಕವಿನಾ ಸ್ತುತಿಂ ಪಠನ್
ದಿವ್ಯ ವೇಣುರಸಿಕಂ ಸಮೀಕ್ಷತೇ ದೈವತಂ ಕಿಮಪಿ ಯೌವತ ಪ್ರಿಯಂ

ಇಲ್ಲಿ ಪ್ರೇಮವನ್ನು ಸೂಚಿಸುವುದು. ಅಂದರೆ ಪ್ರೇಮರೂಪವಾದ ಭಕ್ತಿಯಿಂದಲೇ ಭಗವಂತನನ್ನು ತೃಪ್ತಿಪಡಿಸಬೇಕು. ಮಾತ್ರ ಪ್ರೇಮದಿಂದಲೇ ಗೋಪಾಲನು ಬಂಧಿಸಲ್ಪಟ್ಟಿದ್ದಾನೆ. ಕೃಪೆಯಿಂದಲೇ ಬಂಧನಕ್ಕೊಳಗಾದ. ಈ ಬಂಧನಕಾಲದಲ್ಲಿ ಕಿಶೋರನು ಭೂಮತ್ವವನ್ನು ಪ್ರದರ್ಶಿಸಿದ. ಏಕೆಂದರೆ ಇವನು ಸಾಕ್ಷಾತ್ ಭೂಮಶಬ್ದವಾಚಕನೇ ಆಗಿದ್ದಾನೆ. ಪ್ರಾಕೃತವಾಗಿ ಎಷ್ಟು ಹಗ್ಗಗಳನ್ನು ತಂದು ಕಟ್ಟಿದರೂ ಸಾಲದೇ ಹೋಯಿತು.

ಒರಳು ಕಲ್ಲನ್ನು ಎಳೆಯುವಂತೆ ನಟಿಸಿ ತನ್ನ ಅಸಾಧಾರಣವಾದ ಕರ್ಷಕತ್ವವನ್ನು ಪ್ರಕಟಿಸಿದ. ಅದನ್ನು ಎರಡು ವೃಕ್ಷಗಳ ಮಧ್ಯೆ ಸಿಕ್ಕಿಸಿ ಆ ವೃಕ್ಷಗಳನ್ನು ಬುಡಮೇಲು ಮಾಡಿ ಚೂರು ಚೂರು ಮಾಡಿ ಅತಿಮಾನುಷತ್ವವನ್ನು ಪ್ರಕಟಿಸಿದ. ಇದೊಂದು ಶಾಪವಿಮೋಚನೆಯ ಕೃತ್ಯ. ಪ್ರಪನ್ನರ ಪುಣ್ಯ-ಪಾಪಗಳೆಂಬ

## ಮೋಹಕ ರೂಪ :

ಶ್ರೀಕೃಷ್ಣನನ್ನು ಸಮೀಪದಿಂದ ನೋಡುತ್ತಿರುವ ಅನುಭವವನ್ನು ದೇಶಿಕರು ತಿಳಿಸುತ್ತಾರೆ. ಈ ನಿತ್ಯಯುವಕನ ತೇಜಸ್ಸು ಕಣ್ಣಿಗೆ ಅಂಜನದಂತಿದೆ. ವ್ರಜಸ್ತ್ರೀಯರ ಚುಚ್ಚುವಂಥಾ ಕಡೆಗಣ್ಣಿನ ನೋಟಕ್ಕೆ ಅರ್ಹವಾದ ತೇಜಸ್ಸು ಅದು. ಮುಂಗುರುಳುಳ್ಳ ಕೂದಲು, ನವಿಲುಗರಿ, ಕಿವಿಯಲ್ಲಿ ಹೊಂಬಾಳೆ ಹೂವು ಕೈಯಲ್ಲಿ ಕೋಲು, ಗುಲಾಬಿ ಹೂವು ಮನೋಹರವಾದ ಡಾಬು, ಅದರಲ್ಲಿ ಸಿಕ್ಕಿಸಿರುವ ಕೊಳಲು ಗುಲಗಂಜಿಹಾರ ಮುಂತಾದುವುಗಳಿಂದ ಕೂಡಿದ ಆ ರೂಪ ಹುಚ್ಚುಹಿಡಿಸುವಂಥಾದ್ದು. ಪೂರ್ಣವಾಗಿ ಆ ದಿವ್ಯರೂಪ ಅನುಭವಿಸೋಣವೆಂದರೆ ಕಣ್ಣುರೆಪ್ಪೆಪಾಟ ಅಡ್ಡಿಬರುವುದು ಎಂದು ದೇಶಿಕರು ಹೇಳಿದ್ದಾರೆ. ಈ ಭೂಷಣಗಳ ಹಿನ್ನೆಲೆಯಲ್ಲಿ ಲಕ್ಷ್ಮಿಯು ತನ್ನ ನಿಜರೂಪವನ್ನು ಮರೆಸಿ ಗುಂಜಾಹಾರ ರೂಪದಲ್ಲಿದ್ದಾಳೆ. ಗುಲಗಂಜಿ ಮಾಲೆ ವಕ್ಷಸ್ಥಳದಲ್ಲಿರುವುದರಿಂದ ಗೋಪಾಲನು ಲಕ್ಷ್ಮೀಧರ. ಇವೆಲ್ಲವನ್ನು ಗಮನಿಸಿದರೆ ಗೋಪಾಲನು ವನ್ಯವೇಷಧಾರಿ ಅಥವ ವನವಾಸಿ ಎಂದು ಹೇಳಬಹುದು. ಡೋಲೆಯಲ್ಲಿರುವ ಶಿಶುವನ್ನು ವರ್ಣಿಸುವಾಗ ದೇಶಿಕರು 'ಇವನ ದಿವ್ಯಮಂಗಳ ವಿಗ್ರಹವೆಲ್ಲವೂ ಆಮ್ನಾಯ' ಎಂದು ಹೇಳಿದ್ದಾರೆ. (ಗೋ.ವಿಂ. - ೩)

"ಅವನ ಅಧರಾಮೃತವನ್ನು ಸವಿಯುವ ಆ ಬಿದಿರು ಕೋಲಿನ ಭಾಗ್ಯವೇ ಭಾಗ್ಯ" ಎಂದು ದೇಶಿಕರು ಶ್ರೀಕೃಷ್ಣನ ಅನುಯಾಯಿಯಾದ ಆ ಕೊಳಲನ್ನು ಹೊಗಳಿದ್ದಾರೆ. ಅವನು ವೇಣುಗಾನ ಮಾಡಿದರೆ ಗೋಕುಲ ವಾಸಿಗಳು ತಂತಮ್ಮ ಕೆಲಸಗಳನ್ನು ಅಷ್ಟಕ್ಕೇ ಬಿಟ್ಟು ಅದರಲ್ಲೂ ಸ್ತ್ರೀಯರು ಯಮುನಾ ನದಿತೀರಕ್ಕೆ ಬಂದು ಸೇರುತ್ತಿದ್ದರಂತೆ. ಪಶುಪ್ರಾಣಿಗಳು ಸಹ ತಾವು ಮೇಯುತ್ತಿದ್ದ ಹುಲ್ಲನ್ನು ಕಟಬಾಯಿಯಲ್ಲಿ ಹಾಗೆ ಬಿಟ್ಟು ಕೊಳಲುಗಾನವನ್ನು ಆಲಿಸುತ್ತಿದ್ದುವಂತೆ. ಹೀಗೆ ಆ ಮೂವಸ್ತುವನ್ನೂ ಅವನು ವಾಗ್ಮಿಯನ್ನಾಗಿ ಮಾಡಿದ್ದಾನೆ. ಶೀತದಿಂದ ಆರೋಗ್ಯ ಕೆಡಬಹುದು. ಆದರೆ 'ಅಪಾಂಗ್ಯೆ' (ಅಪಾಂಗ ವೀಕ್ಷಣ) ಹಾಗಲ್ಲ. ಇದರಿಂದ ಎಲ್ಲರು ಮುಗ್ಧರಾಗುತ್ತಿದ್ದರು. ಇಂಥಾವನು ತಮ್ಮ ಎದುರಿನಲ್ಲೇ ವೇಣುನಾದ ಮಾಡುತ್ತಿರುವಂತೆ ತಾವು ಅನುಭವಿಸುತ್ತಿರುವುದನ್ನು ದೇಶಿಕರು 'ಅಸೌ' ಎಂದು ಕರೆದಿದ್ದಾರೆ. (ಗೋ.ವಿಂ. ೧೧) ಗೋಪಿಯರನ್ನು ಕೂಡಿಸುವುದಕ್ಕೆ ವೇಣುಗೀತವೇ ಸಾಧನ. ರಾಸದಲ್ಲಿ ವೇಣುವಿಗೆ ಪ್ರಾಧಾನ್ಯ. ವಿಭವಮೂರ್ತಿಯನ್ನು ಕಪ್ಪುಮೋಡಗಳ ಕಾಂತಿ ಸೌಂದರ್ಯದಿಂದ ಶೋಭಿಸುತ್ತಿರುವ, ಕೊಳಲನ್ನು ಕೆಂಪು ತುಟಿಗಳಲ್ಲಿಟ್ಟುಕೊಂಡ ಆ ಕರುಣಾಮೂರ್ತಿಯನ್ನು ಭಜಿಸುತ್ತೇನೆ. ಅವನು ನನ್ನನ್ನು ಕರುಣಿಸಲಿ ಎಂದು ಪ್ರಾರ್ಥಿಸಿದ್ದಾರೆ. ಗೋಪಿಯ ಅನುಭಾವವನ್ನೇ ತಾವು ತಂದುಕೊಂಡವರಾಗಿ ಭಾವಿಸಿ ಮೋಹವಶಳಾದ ಪ್ರೇಯಸಿಯನ್ನು ರಕ್ಷಿಸುವಂತೆ ತಮ್ಮನ್ನೂ ರಕ್ಷಿಸುವನು, ಗೋಪಿಯನ್ನು ದೇವಿಯಂತೆ ಬಹುಮಾನಿಸುತ್ತಾನೆ ಎಂದು ದೇಶಿಕರು ಗೋಪಿವಲ್ಲ

ಭನ ಸೌಲಭ್ಯಾತಿಶಯವನ್ನು ಹೇಳಿದ್ದಾರೆ. ಶ್ರೀಕೃಷ್ಣನ ತೋಳ ತೆಕ್ಕೆಯಲ್ಲಿರುವ ರಾಧ-ರುಕ್ಮಿಣಿ-ಸತ್ಯಭಾಮೆಯರಂತೆ ತಮಗೂ ಆ ತೋಳಿನ ತೆಕ್ಕೆಯಲ್ಲಿ ಅವಕಾಶವಿದೆ ಎಂದು ಭಾವಿಸಿಕೊಳ್ಳುವರು. ಈ ಪ್ರೇಮಪಾಶಕ್ಕೆ ಸಿಗದವನೇ ಅಭಾಗ್ಯ ಎಂದು ಭಗವಂತನ ಸಾಮಿಪ್ಯವನ್ನು ಬಯಸುತ್ತಾರೆ. "ಆ ಕೆಂದುಟಿಯ ಚೆಲುವನ್ನು ನೋಡಿಕೊಂಡೇ, ವೇಣುನಾದವನ್ನು ಕೇಳಿಕೊಂಡೇ ದೇಹವನ್ನು ಬಿಡಲು ಇಚ್ಚಿಸುತ್ತೇನೆ" ಎಂದು ಸ್ವಾಮಿದೇಶಿಕನ್‌ರವರು ಶ್ರೀಕೃಷ್ಣನ ಅನೇಕ ಬಿಂಬರೂಪಗಳು ಅದರಲ್ಲೂ ಬಾಲಕೃಷ್ಣನ ರೂಪವೇ ತಮಗೆ ಅಂತಿಮ ಸ್ಮೃತಿಯಾಗಬೇಕೆಂದು ಬೇಡಿದ್ದಾರೆ. (ಗೋ.ಏಂ.೧೨) ಬಾಲ ಗೋಪಾಲನ ಬಿಂಬವನ್ನು ಚಿತ್ರಿಸಿಕೊಂಡು "ಈ ಚಿತ್ರವನ್ನು ನನ್ನ ಮನಸ್ಸಿನಲ್ಲಿ ಸೆರೆಹಿಡಿದಿಟ್ಟ ಶಿಲ್ಪಿಯಾರಪ್ಪ? ಎಂದು ಹೇಳಿ ತಮ್ಮ ಆಚಾರ್ಯರ ಕೃಪೆಯೇ ಈ ಸ್ಥಾಯಿ ಭಾವಕ್ಕೆ ಕಾರಣ ಎಂದು ೧೬ನೇ ಪದ್ಯದಲ್ಲಿ ಹೇಳಿರುತ್ತಾರೆ.

## ಭಾಗ್ಯವಂತರು :

ಮಧುರೆ ಸಪ್ತಮೋಕ್ಷ ಧಾಮಗಳಲ್ಲಿ ಒಂದು. ಆದರೆ ಭಾಗ್ಯವೆಲ್ಲಾ ಗೋಕುಲಕ್ಕೆ. ಶ್ರೀಕೃಷ್ಣ ಸಾನಿಧ್ಯದ ಹಿರಿಮೆಯೇ ಈ ಭಾಗ್ಯದ (ಗೋ.ಏ. ೬) ಮುಖ್ಯಸಾರಾಂಶ. ಅವನು ಹುಟ್ಟಿದ್ದು ಮಧುರೆಯಲ್ಲಿ, ಆದರೆ ಲೀಲೆ ಎಲ್ಲಾ ಬೃಂದಾವನದಲ್ಲಿ. ಆದ್ದರಿಂದ ಈ ಕ್ಷೇತ್ರದ ಬಗ್ಗೆ ಭಗವಂತನ ಆದರಾತಿಶಯ ವ್ಯಕ್ತವಾಗುವುದು. ಎಲ್ಲರಿಗೂ ಅತೀವ ಪ್ರಿಯನಾದ ಗೋಪಾಲನು ಮಾಡಿದ ಲೀಲೆಗಳು ಬೇರೆಲ್ಲೂ ಕಾಣಬರುವುದಿಲ್ಲ. ಮಧುರೆಯಲ್ಲಿ ಅವನಿಗೆ ವಿರೋಧಿಗಳಿದ್ದರು. ಗೋಕುಲವಾಸಿಗಳು ಅವನಲ್ಲಿ ಐಕಾಂತಿಕ ಭಾವ ಉಳ್ಳವರಾಗಿದ್ದರು. ಅವರು ಅನ್ಯರು ಇವರು ಅನನ್ಯರು. ಕಿಶೋರನ ಲೀಲೆಯನ್ನು ನೋಡಿ ಅನುಭವಿಸುವ ಭಾಗ್ಯ ಗೋಕುಲವಾಸಿಗಳಿಗಾಯ್ತು. ಅಪಾಂಗದ ಕುಡಿನೋಟ, ಧಾಮಬಂಧನ, ಶಕಟ ಪ್ರಸಂಗಗಳನ್ನು ನೋಡಲು ಗೋಪಿಯರು ಗುಂಪುಗುಂಪಾಗಿ ಧಾವಿಸಿಬಂದರು. ಈ ಭಾಗ್ಯ ಮಧರಾವಾಸಿಗಳಿಗಿಲ್ಲ. ಶಿಶುವು ಸ್ಥಳಾಂತರಗೊಂಡಾಗ ಯಮುನೆ ಇವನ ರೂಪ ನೋಡಿದಳು. ಇದು ಅವಳ ಭಾಗ್ಯ. ಬೇರಾವ ನದಿಯು ವೇಣುಗೋಪಾಲನ ಸಂಗೀತ ಕೇಳಿಲ್ಲ. ಎಷ್ಟೋ ವ್ರಜವಾಸಿಗಳು ಗೋಪಾಲನಿಗೆ ಯೌವನ ಬರುವುದಕ್ಕೆ ಮುಂಚೆ ವ್ರಜದೇಶವನ್ನು ನಿರ್ಗಮಿಸಿದ್ದರು. ರಾಜಪುತ್ರಿ ದೇವಕಿ ಅನುಭವಿಸಬೇಕಾದ ಭಾಗ್ಯ ಗೋಪಿಯರದಾಯ್ತು.

## ಕಾವ್ಯದ ಪ್ರೌಢಿಮೆ :

ಶೈಲಿ, ಅಲಂಕಾರ, ರಸ, ಧ್ವನಿ ಭಾಷಾಲಾಲಿತ್ಯ ಮುಂತಾದ ಗುಣಗಳು ಈ ಸ್ತೋತ್ರಗ್ರಂಥವನ್ನು ಶ್ರೀಮಂತಗೊಳಿಸಿದೆ. ಇದೊಂದು ವಿವಿಧ ರಸಗಳ ಕೃತಿ. ಪೂತನಿಯ ವೃತ್ತಾಂತದಿಂದ ರೌದ್ರ ರಸವೂ, ಮಧುರಾಭಾಗ್ಯ ಗೋಕುಲಕ್ಕೆ ತಿರುಗಿದಾಗ ಅದ್ಭುತ ರಸವೂ, ಭಯದ ನಟನೆ ಮತ್ತು ಕರ್ಷಕತ್ವದಿಂದ ಭಯಾನಕ - ವೀರ ರಸಗಳೂ, ಕೇವಲ ಕರುಣೆಯಿಂದ ಅವತರಿಸಿರುವುದರಿಂದ ದಯಾರಸವೂ 'ದಿವ್ಯವೇಣು ರಸಿಕಂ' ಎಂದು ಹೇಳುವಲ್ಲಿ ಶಾಂತರಸವೂ ಸೌಂದರ್ಯ ವರ್ಣನೆಯಲ್ಲಿ ಶೃಂಗಾರ ರಸವು ವ್ಯಕ್ತವಾಗಿದೆ. ಇಪ್ಪತ್ತು ಲಕ್ಷಣ (ಅಧ್ಯಾಯ)ಗಳುಳ್ಳ ಗ್ರಂಥ 'ವಿಂಶತಿ ಲಕ್ಷಣೇ' ಎಂದು ಮಿಾಮಾಂಸ ಶಾಸ್ತ್ರದಲ್ಲಿದೆ. ಆಧ್ಯಾತ್ಮ ದೃಷ್ಟಿಯಿಂದ ವಿಶಿಷ್ಟಾದ್ವೈತ ಸಿದ್ಧಾಂತದ ಪಾತ್ರವೂ ಇದರಲ್ಲಿದೆ. ಕವಿಯ ಅನುಭವ ಇಲ್ಲಿ ಗೋಕುಲಕ್ಕೆ ಮಾತ್ರ ಸಂಬಂಧಿಸಿದೆ. ಪವಿತ್ರತೆಯ ದೃಷ್ಟಿಯಿಂದ ಗೋಪಾಲಯಂತ್ರ- ಮಂತ್ರಗಳನ್ನು ಗೌಪ್ಯವಾಗಿಡಲು ಶ್ರೀ ಮದಾಚಾರ್ಯರು 'ಗೋಪಾಲ' ಎಂಬ ಪದವನ್ನು ಒಂದುಬಾರಿ ಮಾತ್ರ (೩ನೇ ಪದ್ಯದಲ್ಲಿ) ಉಪಯೋಗಿಸಿದ್ದಾರೆ. ಇದು ಯೌಗಿಕವೆಂದು ತಿಳಿಯಬೇಕು ಎಂದೂ ಹೇಳಿದ್ದಾರೆ. 'ವಂದೇ ಬೃಂದಾವನ ಚರಂ' ಎಂಬ ಪ್ರಾರಂಭಸ್ತೋತ್ರದಿಂದ ದೇಶಿಕರು ಯಾದವಾಭ್ಯುದಯ ಕಾವ್ಯವನ್ನು ಆರಂಭಿಸಿದ್ದಾರೆ. ಗೋಪಾಲ ವಿಂಶತಿಯಲ್ಲಿ ಬರುವ ಅನೇಕ ಶ್ಲೋಕಗಳನ್ನೂ ಪ್ರಧಾನ ಪದಗಳನ್ನು ಈ ಕಾವ್ಯದಲ್ಲಿ ಅಳವಡಿಸಿದ್ದಾರೆ.

## ಫಲಶ್ರುತಿ :

ಈ ಕಾವ್ಯ ಪಂಡಿತ ಪಾಮರರಿಬ್ಬರಿಗೂ ಆದರಣೀಯವಾಗಿದೆ. ಎಷ್ಟೇ ಪಂಡಿತನಾಗಿದ್ದರೂ, ಮೂಢನಿಗೂ, ಭಕ್ತಿಶೂನ್ಯನಿಗೂ ಅವನು ದೂರ. ಕೇವಲ ವ್ಯಾಕರಣ ವ್ಯಾಖ್ಯಾರ್ಥಗಳಲ್ಲಿ ಕಾಲಹರಣ ಮಾಡದೆ, ಭಾವನಾಮಯವಾದ ಈ ಸ್ತೋತ್ರವನ್ನು ಪಠಿಸಿ ಗೋಪಾಲನ ಸಮಿಾಕ್ಷಣರೂಪ ಫಲವನ್ನು ಪಡೆಯಬೇಕು. ಭಕ್ತಿಯಿಂದಲೇ ಈ ಕೃತಿಯನ್ನು ಸ್ತುತಿಸಬೇಕು. ಇಪ್ಪತ್ತು ಶ್ಲೋಕಗಳನ್ನು ಅನನ್ಯ ಮನಸ್ಸಿನಿಂದ ಪಠಿಸುವ ಭಕ್ತನಿಗೆ ಗೋಪಾಲನು ಪ್ರಸನ್ನನಾಗಿ ದರ್ಶನಾನಂದವನ್ನು ಕೊಡುವುದರಲ್ಲಿ ಸಂದೇಹವೇ ಇಲ್ಲ ಎಂದು ಸಾರಿ ಶ್ರೀ ಮದಾಚಾರ್ಯರು ಈ ಮಹಾಕಾವ್ಯವನ್ನು ಮುಗಿಸುತ್ತಾರೆ.

--ಪ್ರಿಯತಾಂ ಶ್ರೀ ಗೋಪೀಜನವಲ್ಲಭಃ--

★★★★★★★★

## ಸಪ್ತಗಿರಿ
## ಬರಹಗಾರರಿಗೆ ಸೂಚನೆ :

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಅಧ್ಯಾತ್ಮಿಕ, ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟನೆಗಾಗಿ ಲೇಖನಗಳನ್ನು, ಕವನ, ಕೀರ್ತನೆ, ಭಾವ, ಛಾಯಾಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

೧) ಲೇಖನಗಳು ಆರು ಫುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು. ಟೈಪ್‌ಮಾಡಿದ ಲೇಖನಗಳು ಅಪೇಕ್ಷಣೀಯ.

೨) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

೩) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

೪) ಕೇವಲ ಫೋಟೋಗಳನ್ನು ಮಾತ್ರ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

೫). ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ರ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

೬) ಗೃಹಲಕ್ಷ್ಮಿ ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

೭) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ :

**ಸಂಪಾದಕರು**

ಸಪ್ತಗಿರಿ

ತಿ. ತಿ. ದೇವಸ್ಥಾನ, ತಿರುಪತಿ--೫೧೭ ೫೦೭

ಚಿತ್ತೂರು ಜಿಲ್ಲೆ, ಆಂ. ಪ್ರ.

# ಶ್ರೀ ವೆಂಕಟೇಶ್ವರ ವನಾಭಿವೃದ್ಧಿ ಯೋಜನೆ

ಭೂಮಿಯ ಒಂದು ವಿಶಿಷ್ಟ ಗುಣ ಇಲ್ಲಿನ ಹಸಿರು. ಗಿಡವಾಗಿ, ಮರವಾಗಿ, ವನವಾಗಿ, ಕಾಡಾಗಿ ಮನುಷ್ಯನ ಜೊತೆಗೇ ಬೆಳೆದು, ಭೂಮಿಯ ಮೇಲಿನ ಮನುಷ್ಯನ ಇರವನ್ನು ಅರ್ಥಪೂರ್ಣ ಆಗಿಸಿರುವುದು ಹಸಿರು. ತಿರುಮಲೆಯ ಕಾಡುಗಳು ಶ್ರೀ ವೆಂಕಟೇಶ್ವರಸ್ವಾಮಿಯ ಸೇವೆಯಲ್ಲಿ ಪರಂಪರೆಯಿಂದ ನೀರುನೆರಳಿನ ತಾಣವಾಗಿ ಪ್ರಸಿದ್ಧಿ ಪಡೆದದ್ದು ಉಂಟು. ಅಂತಹ ಹಿರಿಮೆಯ ಪರಿಸರವನ್ನು ರಕ್ಷಿಸಲು 1981 ರಲ್ಲಿ 25 ಲಕ್ಷ ವೃಕ್ಷಗಳನ್ನು ಬೆಳೆಸುವ ವನಸಂರಕ್ಷಣೆಯ ಕಾರ್ಯಕ್ರಮವನ್ನು ಕೈಗೆತ್ತಿಕೊಳ್ಳಲಾಯಿತು. ಅದರ ಯಶಸ್ವಿ ಅನುಷ್ಠಾನದಿಂದ ಸ್ಫೂರ್ತವಾಗಿ ಹಲವಾರು ವನಾಭಿವೃದ್ಧಿ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಸಾರ್ವಜನಿಕರನ್ನೂ ಈ ಪರಿಸರ ಪರಿರಕ್ಷಣೆಯ ಪವಿತ್ರಕಾರ್ಯದಲ್ಲಿ ಪಾಲುಗೊಳ್ಳಲು ಯೋಜನೆಗಳನ್ನು ರೂಪಿಸಲಾಗಿದೆ. ಅವುಗಳಲ್ಲಿ ಹಲವು ಈ ರೀತಿ ಇವೆ.

## ವೃಕ್ಷ ಸಂವರ್ಧನ ಯೋಜನೆ :

ಒಂದು ಎಕರೆ ಸ್ಥಳದಲ್ಲಿ ರೂ. 15,000 ರೂಪಾಯಿ ನೀಡಿದವರ ಹೆಸರಿನಲ್ಲಿ ಉಪವನವನ್ನು ಬೆಳೆಸಲಾಗುವುದು. ದಾನಿಗಳಿಗೆ ಹತ್ತು ವರ್ಷಗಳಕಾಲ ಪ್ರತಿವರ್ಷದಲ್ಲಿ ಎರಡು ದಿನ ತಿರುಮಲೆಯಲ್ಲಿ ಉಚಿತ ವಸತಿ ನೀಡಿ ಅವರಿಗೆ ಈ ಕಾಲದಲ್ಲಿ 5 ಮಂದಿಗೆ ಉಚಿತ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವೃಕ್ಷ ಪ್ರಸಾದ :

ಪ್ರತಿವರ್ಷವೂ ನೂರು ಹೂ ಹಣ್ಣು ಬಿಡುವ ಸಸಿಗಳನ್ನು ಬೆಳೆಸುವ ಈ ಯೋಜನೆಯಲ್ಲಿ ದಾನಿಗಳ ಹೆಸರಿನಲ್ಲಿ ಪ್ರತಿವರ್ಷವೂ ನೂರು ಗಿಡಗಳನ್ನು ವಿತರಣೆ ಮಾಡಲಾಗುವುದು. ಹತ್ತು ಸಾವಿರ ರೂಪಾಯಿಗಳ ದಾನದಿಂದ ಈ ಯೋಜನೆಯಲ್ಲಿ ಪಾಲುಗೊಳ್ಳುವ ದಾನಿಗಳಿಗೆ ಪ್ರತಿವರ್ಷವೂ ಎರಡುದಿನ ತಿರುಮಲೆಯಲ್ಲಿ ಉಚಿತ ವಸತಿ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ಸ್ಮಾರಕ ವನ :

ಒಂದೆಡೆ ಹತ್ತು ಮರಗಳನ್ನು 5 ವರ್ಷ ನೋಡಿಕೊಳ್ಳುವ ಈ ಯೋಜನೆಯಲ್ಲಿ 2000 ರೂ. ಗಳನ್ನು ನೀಡುವ ದಾನಿಗಳ ಹೆಸರನ್ನೆ ಈ ತರುಸಮೂಹಕ್ಕೆ ನೀಡಲಾಗುವುದು. ಐದು ವರ್ಷಗಳ ಕಾಲ ವರ್ಷಕ್ಕೆ ಒಮ್ಮೆ 5 ಮಂದಿಗೆ ವಿಶೇಷ ಪ್ರವೇಶದ ದರ್ಶನಾವಕಾಶ ನೀಡಲಾಗುವುದು.

## ವನಸಂರಕ್ಷಣ ಭಾಗಸ್ವಾಮ್ಯ :

ಏಳು ಬೆಟ್ಟಗಳ ವನಾಚ್ಛಾದನೆಯನ್ನು ಸಂರಕ್ಷಿಸುವ ಉದ್ದೇಶದ ಈ ಯೋಜನೆಯಲ್ಲಿ 1000 ರೂ.ಗಳ ದಾನದಿಂದ ಪಾಲುಗೊಳ್ಳಬಹುದು. ದಾನಿಗಳ ಹೆಸರನ್ನು ಮುಖ್ಯವಾಗಿ ಪ್ರದರ್ಶಿಸಲಾಗುವುದು. ಅವರ ಐದು ಮಂದಿಗೆ ಒಂದು ವರ್ಷ ವಿಶೇಷ ಪ್ರವೇಶದಲ್ಲಿ ದರ್ಶನಾವಕಾಶ ನೀಡಲಾಗುವುದು.

## ಅಧ್ಯಯನ ವನಗಳು :

ಸಸ್ಯವನದಲ್ಲಿ ಒಂದು ಬಗೆಯ ಸಸ್ಯದ ವಿಶೇಷ ಆರೈಕೆ ಮಾಡಲಾಗುವುದು. ಸಸ್ಯದ ಬಳಿ ದಾನಿಯ ಹೆಸರಿನ ಫಲಕವಿಡಲಾಗುವುದು. ಇದಕ್ಕೆ ದಾನ ನೀಡಬೇಕಾದ ಮೊತ್ತ ರೂ. 500/--

## ವೃಕ್ಷ ದತ್ತತೆ :

ತಿರುಮಲೆಯ ಹಾದಿಯಲ್ಲೂ ಬೀದಿಬದಿಗಳಲ್ಲೂ ವೃಕ್ಷಗಳನ್ನು ಬೆಳೆಸುವ ಈ ಯೋಜನೆಯಲ್ಲಿ 250 ರೂ. ನೀಡಿದವರ ಹೆಸರನ್ನು ಮರದ ಬಳಿ ಫಲಕದಲ್ಲಿ ಪ್ರದರ್ಶಿಸಲಾಗುವುದು.

ತಿರುಮಲೆಯ ಅರಣ್ಯವು ನಮ್ಮ ಪರಂಪರೆಯ ಕೊಡುಗೆಯಾಗಿದ್ದು ಅದನ್ನು ರಕ್ಷಿಸಿ ಮುಂದಿನ ಪೀಳಿಗೆಗೆ ತಲುಪಿಸುವ.

ದಶಕೂಪ ಸಮೋವಾಪಿ ದಶವಾಪಿ ಸಮೋ ಹ್ರದ
ದಶ ಹ್ರದ ಸಮಃ ಪುತ್ರ ದಶಪುತ್ರ ಸಮೋ ದ್ರುಮ

ಹತ್ತು ಬಾವಿಗಳು ಒಂದು ಕೆರೆಗೂ ಹತ್ತು ಕೆರೆಗಳು ಒಂದು ಸರೋವರಕ್ಕೂ ಹತ್ತು ಸರೋವರಗಳು ಒಬ್ಬ ಮಗನಿಗೂ ಹತ್ತು ಗಂಡುಮಕ್ಕಳು ಒಂದು ತರುವಿಗೂ ಸಮ.

ದಯವಿಟ್ಟು ಈ ಉದಾತ್ತ ಯೋಜನೆಗಳಲ್ಲಿ ಭಾಗಿಗಳಾಗಬೇಕೆಂದು ಭಕ್ತ ಬಂಧುಗಳಲ್ಲಿ ವಿನಂತಿಸಲಾಗಿದೆ.

ತಮ್ಮ ದಾನಗಳನ್ನು ಕಳುಹಿಸಬೇಕಾದ ವಿಳಾಸ :

**ಕಾರ್ಯನಿರ್ವಹಣಾಧಿಕಾರಿ,**

ತಿ. ತಿ. ದೇವಸ್ಥಾನಗಳು,

ತಿರುಪತಿ -- 517 507.

ಶ್ರೀ ವೇದಾಂತ ದೇಶಿಕರು, ಜಗತ್ತಿನ ಶ್ರೇಷ್ಠ ಮಹಾ ಪುರುಷರಲ್ಲಿ ಪ್ರಥಮ ಶ್ರೇಣಿಗೆ ಸೇರಿದವರು. ಅವರು ಘನ ವಿದ್ವಾಂಸರು, ಶಾಸ್ತ್ರಸಂಪನ್ನರು. ರಾಮಾನುಜಸಿದ್ಧಾಂತ ಪ್ರವರ್ತನ ಪ್ರಚಾರ ಪರಿಷ್ಕರಣಾನುಷ್ಠಾನದಕ್ಷರು. ಪ್ರೌಢಕವಿವಾಣಿ ಸಂಪನ್ನರು. ಜ್ಞಾನಿಗಳೂ ವಿವೇಕಿಗಳೂ, ವಿರಕ್ತರೂ, ಭಗವತ್ ಕೈಂಕರ್ಯ ಪರರೂ ಆಗಿ ಇಹಪರ ಕಲ್ಯಾಣಮಾರ್ಗವನ್ನು ಜನತೆಗೆ ಬೋಧಿಸಿ ವಿಶ್ವ ಮಾನವ ಪ್ರೇಮವನ್ನು ಬೆಳಗಿದ ಶುದ್ಧಾತ್ಮರು, ದೈವಭಕ್ತರು, ತಪಸ್ವಿಗಳು. ಅವರ ಪ್ರತಿಭೆ, ಮಹಿಮೆ, ಬಹುಮುಖ ಬಹುತೆರ, ದೀರ್ಘಕಾಲದ ಅವಿಶ್ರಾಂತ ಅಧ್ಯವಸಾಯದಲ್ಲಿ, ಶ್ರುತಿಗಳಲ್ಲಿ ಹೇಳಿರುವಂತೆ ನೂರಕ್ಕೂ ಹೆಚ್ಚು ವರ್ಷಗಳನ್ನೇ ಬಾಳಿ ತಮ್ಮಮತ್ತು ಜನತೆಯ ಶ್ರೇಯಸ್ಸಿಗಾಗಿ ಕೈಂಕರ್ಯಮಾಡಿದೆವೆಂಬ ನೆಮ್ಮದಿಯಿಂದ ಇಹಲೋಕವನ್ನು ಬಿಟ್ಟವರು. ಬರಿಯ ದೀರ್ಘಾಯಸ್ಸು ಒಂದೇ ಸಾಲದು, ಅದು ಸಾರ್ಥಕವಾದ ಬಾಳು ಆಗಬೇಕು.

ವರ್ಷಗಳ ದೀರ್ಘಕಾಲದ ವ್ರತದ ನಂತರ ಹುಟ್ಟಿದರೆಂದೂ ಕಥೆಯುಂಟು. ಈಚಿನ ಅವರ ಜೀವಿತಕಾಲದ ಅದ್ಭುತ ಸಾಧನೆಗಳನ್ನು ನೋಡಿದರೆ, ಅವರ ಜನ್ಮವನ್ನು ಕುರಿತು ಅಂತಹ ಕಥೆ ಹುಟ್ಟಿದ್ದರೆ ಆಶ್ಚರ್ಯವಿಲ್ಲ. ನಮ್ಮ ಮಹಿಳೆಯರು ಆ ಕಾಲದಲ್ಲಿ ಸ್ವಾಭಾವಿಕವಾಗಿಯೇ, ದೈವಭಕ್ತರು ವ್ರತ ನಿಯಮಗಳನ್ನು ಅನುಸರಿಸುತ್ತಿದ್ದವರೂ, ಹಿರಿಯರನ್ನು ಗೌರವಿಸುತ್ತಿದ್ದವರೂ, ಗೃಹಿಣೀ ಧರ್ಮವನ್ನು ಪರಮಾತ್ಮನ ಆದೇಶವೆಂಬಂತೆ ಆಚರಿಸುತ್ತಿದ್ದವರೂ ಆಗಿದ್ದರು. ಮಹಾತ್ಮ ಗಾಂಧೀಯವರ ತಾಯಿ, ಶಿವಾಜಿಯ ತಾಯಿ, ಜವಹರಲಾಲ್ ನೆಹ್ರುರವರ ತಾಯಿ ಇವರೆಲ್ಲ ದೈವಭಕ್ತಸಾಧ್ವಿಗಳೇ ಆಗಿದ್ದರು.ತಮ್ಮ ಇಪ್ಪತ್ತನೆಯ ವಯಸ್ಸಿಗೇ ವೇದಾಂತ ದೇಶಿಕರು ಸಂಸ್ಕೃತದಲ್ಲಿಯೂ ಸಕಲ ವಿದ್ಯೆಗಳಲ್ಲಿಯೂ ಪಾರಂಗತರಾಗಿದ್ದರು. ದೇಶ ಸಂಚಾರವನ್ನು ಕೈಕೊಂಡು ಲೋಕಾನುಭವವನ್ನು ಸಂಪಾದಿಸಿದರು. ಆ ಕಾಲದ ಪರಿಸ್ಥಿತಿಯನ್ನೂ ದೇಶಿ

ಕಲಿಪ್ರಣಧಿಲಕ್ಷ್ಣೈಃ
ಕಲಿತಶಾಕ್ಯಲೋಕಾಯತ್ಯೈಃ
ತುರುಷ್ಕಯವನಾದಿಭಿರ್ಜಗತಿ
ಜೃಂಭಮಾಣಂ ಭಯಂ

ಶಾಕ್ಯರೂ ಲೋಕಾಯಿತರು ಮೊದಲಾದ ಪಾಷಂಡಿಗಳಿಂದ ಕೂಡಿ ಕಲಿಪುರುಷನ ದೂತರೋ ಎಂಬಂತಿರುವ ತುರುಷ್ಕ ಯವನಾದಿಗಳಿಂದ ಜಗತ್ತಿಗೆ ಭಯವುಂಟಾಗಿತ್ತು. ಆ ಕಾಲದಲ್ಲಿಯೇ ವೇದಾಂತದೇಶಿಕರು ಮೈಸೂರು ದೇಶದ ಗಡಿ ಸತ್ಯಾಗಾಲಕ್ಕೆ ಬಂದಿದ್ದರು. ಮೈಸೂರು ಅಂದೂ ಸಹ ಸಂತರಿಗೂ ಶರಣಾರ್ಥಿಗಳಿಗೂ ರಕ್ಷಣಾಸ್ಥಾನವಾಗಿತ್ತು. ಅನಂತರ ವಿದ್ಯಾರಣ್ಯರ ಪ್ರಭಾವದಿಂದ ವಿಜಯನಗರ ಸ್ಥಾಪಿತವಾಗಿ ಗೋಪಣ್ಣನಾಯಕನು ಶ್ರೀರಂಗವನ್ನು ನಿರುಪಾಧಿಕ ಮಾಡಿದ ಮೇಲೆ, ವೇದಾಂತದೇಶಿಕರು ಅಲ್ಲಿ ಹೋಗಿ ಮತ್ತೆ ನೆಲೆಸಿದರು. ವಿದ್ಯಾರಣ್ಯರು, ಧರ್ಮಸಂಸ್ಥಾಪನೆಗಾಗಿ ರಾಜ್ಯವನ್ನು ಕಟ್ಟದಿದ್ದರೆ ಸಾಧ್ಯವಿಲ್ಲವೆಂದು



# ವೇದಾಂತದೇಶಿಕರ ಕಾವ್ಯವೈಭವ



ದಿ|| ಗೊರೂರು ರಾಮಸ್ವಾಮಯ್ಯಂಗಾರ್

ತರವೋಽಪಿ ಹಿ ಜೀವಂತಿ,
ಜೀವಂತಿ ಮೃಗಪಕ್ಷಿಣಃ
ಸ ಜೀವತಿ ಮನೋ ಯಸ್ಯ
ಮನಸೇ ನ ಹಿ ಜೀವತಿ

ಗಿಡಮರಗಳೂ ಬಾಳುತ್ತವೆ. ಮೃಗಪಕ್ಷಿಗಳೂ ಬಾಳುತ್ತವೆ. ಆದರೆ ಮನಸ್ಸಿನಿಂದ ಬುದ್ಧಿ, ಆತ್ಮಬಲದಿಂದ ಯಾರು ಬಾಳುತ್ತಾರೋ ಅವರೇ ನಿಜವಾಗಿ ಬಾಳುವವರು. ವೇದಾಂತ ದೇಶಿಕರು ನಿಜವಾಗಿ ಬುದ್ಧಿ ಪ್ರಖರತೆಯಿಂದಲೂ ಹೃದಯ ವೈಶಾಲ್ಯದಿಂದಲೂ ಸದ್ಭಾವನೆಗಳ ಪ್ರೇರಣೆಯಿಂದಲೂ ಆತ್ಮಬಲದಿಂದಲೂ ಬಾಳಿದವರು, ನೂರುಜನ ಸಾವಿರಜನ, ನೂರು ಬಾಳಿನಲ್ಲಿ ಸಾಧಿಸಲಾಗದುದನ್ನು ಅವರು ಒಂದೇ ಬಾಳಿನಲ್ಲಿ ತಾವೊಬ್ಬರೇ ಅನೇಕಕ್ಷೇತ್ರಗಳಲ್ಲಿ ಸಾಧಿಸಿದರು.

ಅವರು ಜನ್ಮತಾಳಿದುದೇ ಬಹಳ ಪ್ರಕ್ಷುಬ್ಧವಾದ ಮತ್ತು ಹಿಂದೂ ಧರ್ಮಕ್ಕೆ ರಾಹುಹಿಡಿದಿದ್ದ ಕಾಲವಲ್ಲಿ. ಅವರು ತಮ್ಮ ತಾಯಿಯ ಹನ್ನೆರಡು ವರು

ಕರ ಸಾಹಸದ ಪರಿಚಯವನ್ನೂ ಸೂಚಿಸಲು, ದೇಶಿಕರು, ತುರುಷ್ಕರ ಕೈಯಲ್ಲಿ ಮಡಿದ ಸುದರ್ಶನಾಚಾರ್ಯರ ಶ್ರುತ ಪ್ರಕಾಶಿಕಾ ಗ್ರಂಥದ ತಾಳೆಗರಿಯ ಪ್ರತಿಯನ್ನೂ ಅವರ ಇಬ್ಬರು ಚಿಕ್ಕ ಮಕ್ಕಳನ್ನೂ ತಮ್ಮೊಂದಿಗೆ ಯುದ್ಧಭೂಮಿಯ ಶವರಾಶಿಯಲ್ಲಿ ಅವಿತಿಟ್ಟುಕೊಂಡು ರಕ್ಷಿಸಿಕೊಂಡರೆಂಬ ಆಖ್ಯಾಯಿಕೆ ಇದೆ. ವೇದಾಂತ ದೇಶಿಕರೇ ಹೇಳುವಂತೆ ಅವರು ಯೌವನದಲ್ಲಿ ಬಾಳಿದುದು ಭಯಂಕರ ಕಾಲ.

ಹರಿಹರ ಬುಕ್ಕರ ಮೂಲಕ ರಾಜ್ಯಸ್ಥಾಪನೆ ಮಾಡಿಸಿದರು. ಹಿಂದೂಗಳ ದೈನ್ಯತೆಯ ಪರಾಕಾಷ್ಠೆಯನ್ನು ಹೊಂದಿದ್ದ ಆ ಕಾಲದಲ್ಲಿ ಅದೂ ಅವಶ್ಯಕವಾಗಿತ್ತು. ಕ್ಷತ್ರಿಯ ಬಾಹುಬಲದ ಮೂಲಕ ವಿದ್ಯಾರಣ್ಯರು ಸ್ಥಾಪಿಸಿದುದನ್ನು, ವೇದಾಂತ ದೇಶಿಕರು ತಮ್ಮ ವೇದಶಾಸ್ತ್ರಧ್ಯಯನ, ಧರ್ಮಪ್ರಚಾರ, ಗ್ರಂಥರಚನೆ, ಜನರಲ್ಲಿ ಭಕ್ತಿಭಾವನೆ ಬೆಳವಣಿಗೆಗೆ

ವೇದಾಂತ ದೇಶಿಕರ ಬಗ್ಗೆ ಹಲವಾರು ಗ್ರಂಥಗಳು ಬಂದಿರುವುದುಂಟು. ಅವುಗಳಲ್ಲಿ 'ದೇಶಿಕ ಸಂಭಾವನಾ ಗ್ರಂಥ'ವೂ ಒಂದು. ದೇಶಿಕರ ಜೀವನ, ಸಾಹಿತ್ಯಗಳ ಮೇಲೆ ಬೆಳಕು ಚೆಲ್ಲುವ ಸಂಸ್ಕೃತ, ಕನ್ನಡ, ಆಂಗ್ಲಭಾಷೆಯ ಕೃತಿ. ವಿವಿಧ ಪಂಡಿತರಿಂದ ಬರೆಯಲ್ಪಟ್ಟ ಲೇಖನಗಳ ಕೃತಿ. ದಿ|| ಡಿ. ಕೃಷ್ಣ ಅಯ್ಯಂಗಾರ್ಯರಿಂದ ಸಂಪಾದಿತವಾಗಿ ಪ್ರಕಟವಾದ ಈ ಕೃತಿಯ ಒಂದು ಲೇಖನ - ದೇಶಿಕರ ಕಾವ್ಯವೈಭವವನ್ನು ಕುರಿತದ್ದು - ದಿ|| ಗೋರೂರು ರಾಮಸ್ವಾಮಿ ಅಯ್ಯಂಗಾರ್ಯರು ರಚಿಸಿದ ಲೇಖನವನ್ನು ಇಲ್ಲಿ ಸಾದರಪಡಿಸಲಾಗಿದೆ. ಗೋರೂರರ ಬಗ್ಗೆ ಕನ್ನಡಿಗರಿಗೆ ಪರಿಚಯಿಸಬೇಕಾದ ಅಗತ್ಯವಿಲ್ಲ. ಗಾಂಧೀ ಅನುಯಾಯಿಗಳಾಗಿ, ಸ್ವಾತಂತ್ರ್ಯ ಸತ್ಯಾಗ್ರಹಿಗಳಾಗಿ, ಹಾಸ್ಯ ಲೇಖಕರಾಗಿ, ಅವರ ಸಾಧನೆಗಳು ಸರ್ವ ಮಾನ್ಯವಾದವು. ಅವರು ಸನಾತನ ಧರ್ಮಪ್ರೇಮಿಗಳೂ ಆಗಿ ಅತ್ಯುತ್ತಮ ಮಟ್ಟದ ರಸಜ್ಞರೂ ಆಗಿದ್ದರು ಎಂಬುದು ಈ ಲೇಖನದಿಂದ ಪ್ರಸ್ಫುಟಗೊಳ್ಳುತ್ತದೆ.

ಉಪಯೋಗಿಸಿಕೊಂಡರು. ವೇದಾಂತದೇಶಿಕರು, ದೀರ್ಘಕಾಲದ ತಮ್ಮ ಧರ್ಮಪ್ರಚಾರ ಜ್ಞಾನಪ್ರಚಾರಗಳನ್ನು ನಿರಾತಂಕವಾಗಿ ಮಾಡಲು ಹರಿಹರಬುಕ್ಕರು ವಿದ್ಯಾರಣ್ಯ ಸ್ಫೂರ್ತಿಯಲ್ಲಿ ರಾಜ್ಯದಲ್ಲಿ ನೆಮ್ಮದಿಯನ್ನು ಸ್ಥಾಪಿಸಿದುದೂ ಸಹಾಯಕವಾಯಿತು. ಹೀಗೆ ವಿದ್ಯಾರಣ್ಯರೂ ವೇದಾಂತದೇಶಿಕರೂ ಒಬ್ಬರಿಗೊಬ್ಬರು ಪೂರಕವಾಗಿ ಸಹಾಯಕರಾಗಿ ಹಿಂದೂಧರ್ಮ ಜಾಗ್ರತಿಯನ್ನು ಮಾಡಿದರು. ಇಲ್ಲದಿದ್ದರೆ ಅಂದಿನ ಕಠಿಣಪರಿಸ್ಥಿತಿಯಲ್ಲಿ ಹಿಂದೂ ಧರ್ಮ ಉಳಿಯುವುದು ಕಷ್ಟವಾಗುತ್ತಿತ್ತು. ವೇದಾಂತದೇಶಿಕರು ಶ್ರೀರಂಗದಲ್ಲಿ ನೆಲಸಿದಮೇಲೆ ಗೋಪಣ್ಣನ ಶೌರ್ಯವನ್ನೂ ಭಕ್ತಿಯನ್ನೂ ಪ್ರಶಂಸಿಸಿ ರಚಿಸಿದ ಶ್ಲೋಕಗಳು, ಶ್ರೀರಂಗದ ಪ್ರಾಕಾರದಲ್ಲಿ ಇಂದಿಗೂ ಇವೆ. ಅನಂತರ ಆಚಾರ್ಯರು ತಮ್ಮ ಬಾಳಿನ ಉಳಿದ ಕಾಲವನ್ನೆಲ್ಲಾ (೧೦೧ ವರುಷಗಳ ವರೆಗೆ, ೧೨೦ ವರುಷ ಎಂದೂ ಹೇಳುತ್ತಾರೆ) ಗ್ರಂಥರಚನೆ ತತ್ವಪ್ರಚಾರ, ರಾಮಾನುಜ ಸಿದ್ಧಾಂತ ಪ್ರಚಾರ, ಶಿಷ್ಯೋಪದೇಶ, ಸಿದ್ಧಾಂತ ಪರಿಷ್ಕರಣ, ಭಗವದ್ ಭಕ್ತಿಧಾರಾ ಕಾವ್ಯರಚನೆಗಳು, ಧರ್ಮನಿರೂಪಣೆ, ಆಕಾಲದ ಪದ್ಧತಿಯಂತೆ ತನಗೆ ಪ್ರಾಮಾಣಿಕವಾಗಿ ಸರಿ ಎಂದು ತೋರಿದ ಸಿದ್ಧಾಂತವನ್ನು ನಿಷ್ಕೃಷ್ಟವಾಗಿಯೂ ನಿಸ್ಸಂದೇಹವಾಗಿಯೂ ಪ್ರತಿಪಾದಿಸಿ ಎದುರಾಳಿಯನ್ನು ಸೋಲಿಸುವುದು ಇವುಗಳಲ್ಲಿ ಕಳೆದರು. ಅವರ ವಿದ್ವತ್ತು, ತರ್ಕಬದ್ಧವಾದ ಸರಣಿ, ಆಧ್ಯಾತ್ಮ ಸಾಧನೆಗಳಿಂದ ಅವರಿಗೆ ವೇದಾಂತಾಚಾರ್ಯ ಎಂಬ ಬಿರುದುಬಂದಿತು. ಅದನ್ನು ಅವರು ಸಾರ್ಥಕಪಡಿಸಿಕೊಂಡರು.

ಶ್ರೀರಂಗಭರ್ತುಃ ಕಿಮಪಿ<br>
ದಧದಹಂ ಶಾಸನಂ ತತ್‌ಪ್ರಸತ್ಯೈ<br>
ಸತ್ಯೇಕಾಲಂಬಿಭಾಷ್ಯಂ<br>
ಯತಿಪತಿಕಥಿತಂ ಶಶ್ವದಧ್ಯಾಪ್ಯಯುಕ್ತಾನ್<br>
ವಿಶ್ವಸ್ಮಿನ್ನಾಮರೂಪಾಣ್ಯನುವಿಹಿತವತಾ<br>
ತೇನ ದೇವೇನ ದತ್ತಾಂ<br>
ವೇದಾನ್ತಾಚಾರ್ಯಸಂಜ್ಞಾಂ<br>
ಅವಹಿತಬಹುವಿತ್ತಾರ್ಥಮನ್ವರ್ಥಯಾಮಿ

"ಶ್ರೀರಂಗನಾಥನೇ ನನಗೆ ವೇದಾಂತಾಚಾರ್ಯ ಎಂಬ ಬಿರುದನ್ನು ಅನುಗ್ರಹಿಸಿದನು. ಈ ಆಜ್ಞೆಯನ್ನು ಶಿರಸಾವಹಿಸಿ ನಾನು ಜ್ಞಾನಪಿಪಾಸುಗಳಾದ ಶಿಷ್ಯರಿಗೆ, ಸತ್ಯವನ್ನೇ ಅವಲಂಬಿಸಿರುವ ರಾಮಾನುಜ ಭಾಷ್ಯವನ್ನು ಅಹರ್ನಿಶಿ ಬೋಧಿಸಿ ನನಗೆ ದೊರೆತ ಹೆಸರನ್ನು ಅನ್ವರ್ಥವಾಗಿ ಮಾಡುತ್ತೇನೆ."

ವೇದಾಂತದೇಶಿಕರು ತಮ್ಮ ಜೀವಿತವನ್ನೆಲ್ಲ ಜನಸೇವೆಗಾಗಿಯೇ ವಿನಿಯೋಗಿಸಿದರು. ರಾಮಾನುಜೀಯ ಸಿದ್ಧಾಂತದಂತೆ ಪರಮಾತ್ಮನ ಕೈಂಕರ್ಯವೇ ಜೀವನದ ಗುರಿ. ಈ ಕೈಂಕರ್ಯದಿಂದಲೇ ಪರಮಾತ್ಮನ ಸಾನ್ನಿಧ್ಯ ಪ್ರಾಪ್ತವಾಗುವುದು. ಇದು ಆಗಬೇಕಾದರೆ, ಜೀವನು, ತನಗೆ ಪೂರ್ಣ ಸ್ವಾತಂತ್ರ್ಯ ಎಂಬುದಿಲ್ಲವೆಂಬುದನ್ನರಿತು, ತನಗೆ ಇರುವುದು ಭಗವಂತನು ಕೊಟ್ಟ ಸ್ವಾತಂತ್ರ್ಯವಷ್ಟೇ ಎಂದು ಒಪ್ಪಿ (ದತ್ತಸ್ವಾತಂತ್ರ್ಯ) ಸಂಸಾರ ಕ್ಲೇಶದಿಂದ ಬಿಡುಗಡೆ ಹೊಂದಿ ಭಗವಂತನ ಸಾಯುಜ್ಯವನ್ನು ಸೇರಲು ಪ್ರಯತ್ನಿಸಬೇಕು. ಇದಕ್ಕೆ ಮಾರ್ಗ ಭಗವದ್ಧ್ಯಾನ, ಸೇವೆ, ಅಭ್ಯಾಸ, ಅನುಷ್ಠಾನ, ನವವಿಧಭಕ್ತಿ, ಭಕ್ತರ ಸಹವಾಸ, ಸದಾ ಕಾರ್ಯತತ್ಪರತೆ, ಕೊನೆಯಲ್ಲಿ ದೇವರಲ್ಲಿ ಪೂರ್ಣ ಶರಣಾಗತಿ ಇವು ಮುಖ್ಯವಾದುವು. ಪರಮಾತ್ಮನ ಕೃಪೆಗೆ ಪಾತ್ರರಾಗಲು ಉತ್ತಮ ಅಧಮ ಎಂಬ ಭೇದವಿಲ್ಲ. ಎಲ್ಲರಿಗೂ ಅರ್ಹತೆ ಇದೆ. ದೇವರಲ್ಲಿ ಪ್ರಪತ್ತಿಯನ್ನು ಹೊಂದಲು ಎಲ್ಲರಿಗೂ ಅರ್ಹತೆ ಇದೆ. ಜೀವಿಗಳೆಲ್ಲಾ ಮೋಕ್ಷವನ್ನು ಹೊಂದಬಹುದು. ದುಷ್ಟರು ಎನಿಸಿಕೊಳ್ಳುವರೂ ಪರಮಾತ್ಮನ ಅನುಗ್ರಹವನ್ನು ಪಡೆಯಬಹುದು. ವೇದಾಂತದೇಶಿಕರು ಸಮಸ್ತ ಮಾನವರಲ್ಲಿಯೂ ಈ ನಂಬಿಕೆಯನ್ನು ಹೆಚ್ಚಿಸಿ ಮಾರ್ಗವನ್ನು ತೋರಿಸಲು ತಮ್ಮ ಜೀವಿತವೆಲ್ಲ ಶ್ರಮಿಸಿದರು. ಮೋಕ್ಷ ಬರಿಯ ಸನ್ಯಾಸಿಗಳಿಗೆ, ಯತಿಗಳಿಗೆ ಎಂದು ಕೆಲವರು ಭಾವಿಸುತ್ತಾರೆ. ಗೃಹಸ್ಥನಾದವನಿಗೆ ಇದು ಸಾಧ್ಯವಿಲ್ಲ, ಸಂಸಾರದ ಕೋಟಲೆಯಲ್ಲಿ ಅವನಿಗೆ ದೇವರಮೇಲೆ ಮನಸ್ಸು ಬರುವುದಿಲ್ಲವೆಂದೂ ಹೇಳುತ್ತಾರೆ. ಎಲ್ಲರಿಗೂ ಮೋಕ್ಷಕ್ಕೆ ಅಧಿಕಾರವಿದೆ ಎಂಬುದನ್ನು ತೋರಿಸುವುದಕ್ಕಾಗಿಯೇ ವೇದಾಂತ ದೇಶಿಕರು ತಾವು ದೀರ್ಘಕಾಲ ಗೃಹಸ್ಥ ಜೀವನವನ್ನೇ ನಡೆಸಿ, ಪುತ್ರರನ್ನು ಪಡೆದು, ಸಂಸಾರದ ಕೆಸರಿನಲ್ಲಿ ಹೂತುಹೋಗದೆ, ಮಕ್ಕಳು ಮೊಮ್ಮಕ್ಕಳಿಗೂ ಆಗುವಷ್ಟು ಆಸ್ತಿಯನ್ನು ಸಂಪಾದಿಸುವ ಹುಚ್ಚಿಗೆ ಬೀಳದೆ, ತೃಪ್ತಿ ತ್ಯಾಗ ಅನಾಸಕ್ತಿಗಳಿಂದ, ತಲೆಯನ್ನು ಮೇಲೆತ್ತಿನಿಂತು, ಸಂಸಾರಿಗಳೆಲ್ಲ ಉದ್ಧಾರವಾಗುವ ಪ್ರಪತ್ತಿ ಮಾರ್ಗವನ್ನು ಜನರಿಗೆ ತೋರಿಸಿದರು. ಆದುದರಿಂದಲೇ ಅವರು ಸಮಸ್ತಮಾನವರಿಗೂ ಕಲ್ಯಾಣಮಾರ್ಗವನ್ನು ತೋರಿಸಿದ ಮಾನವಪ್ರೇಮಿ, ಸಂತರು.

ಈ ಎಲ್ಲ ಗುಣಗಳ ಜೊತೆಗೆ, ಶ್ರೀ ವೇದಾಂತದೇಶಿಕರು, ಅಸಾಧಾರಣ ಪ್ರೌಢಿಮೆಯ ಕವಿಗಳಾಗಿದ್ದುದು ಒಂದು ಸೌಭಾಗ್ಯ. ಕಾವ್ಯಶಕ್ತಿ ಶ್ರೀ ವೇದಾಂತದೇಶಿಕರಿಗೆ ಎರಡನೆಯ ಸ್ವಭಾವದಂತೆ. ಅವರಿಗೆ "ಕವಿತಾರ್ಕಿಕಸಿಂಹ" ಎಂದು ಬಿರುದು ಬಂದುದೇನೂ ಅತಿಶಯೋಕ್ತಿಯಲ್ಲ. ಯಾವ ವಿಷಯವನ್ನೂ ಕವಿತಾವಾಣಿಯಿಂದ ಹೇಳುವ ಅಸಾಧಾರಣ ಸ್ಫೂರ್ತಿ, ಅವರಿಗೆ ದೈವಾನುಗ್ರಹದಿಂದ ಪ್ರಾಪ್ತವಾಗಿತ್ತು. [illegible] ದ್ಯಾವದಿಂದ ಆದೇಶವೂ ಬಂದಮೇಲೆಯೇ ಅವರು ಕೃತಿರಚನೆಗೆ ಪ್ರಾರಂಭಿಸಿದರು. ಅವರ ಕಾವ್ಯಶಕ್ತಿಗೆ ಹೊರತಾದ ವಸ್ತುವೇ ಯಾವುದೂ ಇರಲಿಲ್ಲ. ಸಂಸ್ಕೃತ ತಮಿಳು ಪ್ರಾಕೃತಗಳಲ್ಲಿ ಕಾವ್ಯ, ನಾಟಕ ಸ್ತೋತ್ರಗಳ ವಿಷಯಗಳಿರಲಿ - ಸಿದ್ಧಾಂತ ರಹಸ್ಯಗಳು, ಮತಧರ್ಮ ಪ್ರಕ್ರಿಯಾ ಪ್ರಬಂಧಗಳು ಬೋಧಕಾತ್ಮಕ ಪ್ರಬಂಧಗಳು, ವೇದಾಂತ ಪ್ರಕರಣಗ್ರಂಥಗಳು, ಜಟಿಲ ತತ್ವಶಾಸ್ತ್ರ ಭೂಗೋಳ ನಿರ್ಣಯ ಎಲ್ಲವೂ ಅವರ ಕಾವ್ಯಶ್ರೀಗೆ ಒಗ್ಗಿವೆ. ಅವರೇ ಒಂದು ಕಡೆ "ಕವಿಯಾಗಿ ಕವನಮಾಡಿದ್ದೇನೆ. ವೇದಾಂತಿಯಾಗಿ ತತ್ವನಿರೂಪಣೆ ಮಾಡಿದ್ದೇನೆ" ಎಂದಿದ್ದಾರೆ. ದೊಡ್ಡಯ್ಯಾಚಾರ್ಯರು ಇವರನ್ನು ಕುರಿತು "ವೇದಾಂತ ದೇಶಿಕರು, ಹಯಗ್ರೀವ ತೇಜಸ್ಸಿನಿಂದ ಉಜ್ವಲವಾದ ಪ್ರತಿಭಾಶಕ್ತಿ ಸಂಪನ್ನರಾಗಿ ಕವಿತಾರ್ಕಿಕಸಿಂಹ, ಸರ್ವತಂತ್ರ ಸ್ವತಂತ್ರರಾಗಿ, ವೇದಾಂತಾಚಾರ್ಯರೆಂಬ ಬಿರುದನ್ನು ಹೊಂದಿ ಗುರು ಪೀಠದಲ್ಲಿ ವಿರಾಜಿಸುತ್ತಿದ್ದಾರೆ" ಎಂದಿದ್ದಾರೆ. ವೇದಾಂತ ದೇಶಿಕರನ್ನು ಆಚಾರ್ಯರೂ, ತಪಸ್ವಿಗಳೂ, ಗುರುಗಳೂ, ಬೋಧಕರೂ ಎಂದು ಅಂಗೀಕರಿಸಿದ್ದಂತೆ, ಹಿಂದಲ ಕಾಲದಿಂದಲೂ ಕವಿಗಳು ಉದ್ದಾಮ ಮತ್ತು ಶ್ರೇಷ್ಠಕವಿಗಳೆಂದೂ ಎಣಿಸಿದ್ದರು. ವಿಶ್ವಗುಣಾದರ್ಶದ ವೆಂಕಟಾಧ್ವರಿಗಳು ಹೀಗೆ ಹೇಳುತ್ತಾರೆ "ಮಾಘ, ಚೋರ, ಮಯೂರ, ಮುರರಿಪು ಭಾರವಿ, ಶ್ರೀಹರ್ಷ, ಕಾಳಿದಾಸ, ಭವಭೂತಿ, ಭೋಜರಾಜ, ದಂಡಿ, ಡಿಂಡಿಮ, ವೇದಾಂತಾಚಾರ್ಯ, ಬಿಲ್ಹಣ, ಬಾಣಭಟ್ಟ ಇವರು ಮತ್ತು ಸುಬಂಧುವೇ ಮೊದಲಾದ ಬೇರೆ ಕೀರ್ತವಂತರಾದ ಕವಿಗಳು ತಮ್ಮ ಕವಿತೆಗಳಿಂದ ಈ ಜಗಕ್ಕೆ ಆನಂದವುಂಟುಮಾಡಿದ್ದಾರೆ." ವೇದಾಂತದೇಶಿಕರು, ಗೌಡ, ಪಾಂಚಾಲಿ, ವೈದರ್ಭಿ ಎಂಬ ಮೂರು ಪ್ರಭೇದಗಳಲ್ಲಿಯೂ ನಿರರ್ಗಳವಾಗಿ ಕಾವ್ಯರಚನೆ ಮಾಡಿದ್ದಾರೆ.

ಶ್ರೀ ವೇದಾಂತದೇಶಿಕರ ಎರಡು ಕಾವ್ಯಗಳ ಪೈಕಿ, ಯಾದವಾಭ್ಯುದಯ, ಶ್ರೀಕೃಷ್ಣನ ದಿವ್ಯಚರಿತ್ರೆ. ಕವಿ ಸಹಜವಾದ ಅಭಿಮಾನದಿಂದ ಮತ್ತೊಬ್ಬ ಉದ್ದಾಮಕವಿ ಕಾಳಿದಾಸನನ್ನು ಪ್ರೀತಿಸಿ ಮೆಚ್ಚಿದ ಆಚಾರ್ಯರು, ಕಾಳಿದಾಸನು ರಘುವಂಶವನ್ನು ಬರೆದಂತೆ ತಾವೂ ಕೃಷ್ಣ ಮಹಿಮಾದರ್ಶವಾದ ಯಾದವಾಭ್ಯುದಯ ಕಾವ್ಯವನ್ನು ಬರೆದರು. ಪರಮಾತ್ಮನೇ ಪ್ರಿಯ, ಕವಿಯೇ ಪ್ರೇಯಸಿ. ಭಕ್ತಿ ಭಾವದಿಂದ ಆರ್ದ್ರನಾದ ಕವಿ, ಪ್ರೇಯಸಿ ಪ್ರಿಯನಲ್ಲಿ ಹೇಗೋ ಹಾಗೆ ಸರ್ವಸ್ವವನ್ನೂ ಕೃಷ್ಣನಲ್ಲಿ ಅರ್ಪಿಸುತ್ತಾರೆ. ದೇವರೇ ಒಡೆಯ, ನಾವೆಲ್ಲ ದಾಸರು ಎಂಬ ಭಾವ. ದೇವರೊಬ್ಬನೇ ಪುರುಷ, ಉಳಿದ ಜಗತ್ತಿನ ಜನರೆಲ್ಲ ಸ್ತ್ರೀ

ಎಂಬ ಭಾವವೂ ಇಲ್ಲಿ ಎದ್ದು ಕಾಣುತ್ತದೆ. "ಅಸಂಖ್ಯ ಮನ್ಮಥರೂಪಗಳು ಏಕೀಭವಿಸಿ ತಮ್ಮ ಸೌಂದರ್ಯವನ್ನು ಪ್ರಕಟಿಸಿದರೂ ಯದುಪತಿಯಾದ ಕೃಷ್ಣನ ಕಾಂತಿ ಶರಧಿಯ ಒಂದು ಬಿಂದುವನ್ನೂ ಅನುಕರಿಸಲು ಸಾಧ್ಯವಿಲ್ಲ. ಅಂತಹ ಕೃಷ್ಣನನ್ನು ನೋಡಿ ಅನುಭವಿಸುವ ಇಚ್ಛೆಯಿಂದ ಜಿತೇಂದ್ರಿಯರಾದ ಋಷಿಗಳು ಮನಸ್ಸಿನಿಂದಲೇ ತಾವು ಸ್ತ್ರೀಯರೆಂಬ ಭಾವನೆಯನ್ನು ಧರಿಸಿದರು" ಈ ಕಾವ್ಯದ ಪ್ರಥಮ ಶ್ಲೋಕದಲ್ಲಿಯೇ ಗೋಪೀಜನ ಮತ್ತು ಶ್ರೀಕೃಷ್ಣನ ಪ್ರೇಮ ಸೂಚನೆ ಇದೆ.

ವಂದೇ ವೃಂದಾವನಚರಂ
ವಲ್ಲವೀಜನವಲ್ಲಭಂ
ಜಯಂತೀ ಸಂಭವಂ ಧಾಮ
ವೈಜಯಂತೀ ವಿಭೂಷಣಂ

ವೃಂದಾವನ ಸಂಚಾರಿ, ಗೋಪಿಕಾಸ್ತ್ರೀಯರ ಪ್ರಿಯ, ವೈಜಯಂತಿ ಎಂಬ ಮಾಲಿಕೆಯನ್ನು ಧರಿಸಿದ ಜಯಂತಿ ದಿನದಲ್ಲಿ ಪ್ರಕಟಗೊಂಡ ಶ್ರೀಕೃಷ್ಣನನ್ನು ವಂದಿಸುತ್ತೇನೆ. ಗೋಪಿಕಾ ಸ್ತ್ರೀಯರಿಗೆ ಶ್ರೀಕೃಷ್ಣನಲ್ಲಿರುವ ಪ್ರೇಮವನ್ನು ಕವಿ, ತನಗೆ ಪರಮಾತ್ಮನಲ್ಲಿರುವ ಪ್ರೇಮಕ್ಕೆ ಹೋಲಿಸಿಕೊಳ್ಳುತ್ತಾನೆ. ಯಾದವಾಭ್ಯುದಯ, ಕೃಷ್ಣನು ದುಷ್ಟನಿಗ್ರಹಕ್ಕಾಗಿಯೂ ಅವತಾರ ಎತ್ತಿ, ಮಾಡಿದ ಕಾರ್ಯಗಳ ವಿವರಣೆಯಾದುದರಿಂದ ವೀರರಸ ಪ್ರಧಾನವಾಗಿಯೂ ಇದೆ. ಶ್ರೀ ವೇದಾಂತ ದೇಶಿಕರು ಸರ್ವತಂತ್ರ ಸ್ವತಂತ್ರರು ಎಂಬುದನ್ನು ತೋರಿಸುವುದಕ್ಕೋ ಎಂಬಂತೆ ಆ ಕಾವ್ಯದಲ್ಲಿ, ಅಂದಿನ ಕವಿಗಳಲ್ಲಿ ಪರಿಪಾಠವಾಗಿದ್ದ ಚಮತ್ಕಾರ ಅತಿಶಯೋಕ್ತಿ ಏಕಾಕ್ಷರೀ ಶ್ಲೇಷೆ, ಯಮಕ, ಚಿತ್ರಕವಿತೆ ಪದಬಂಧ ಇವುಗಳಲ್ಲಿ ತಮ್ಮ ಶಕ್ತಿಯ ಉದಾಹರಣೆಗಳನ್ನು ಪ್ರದರ್ಶಿಸಿದ್ದಾರೆ. ಅವುಗಳನ್ನು ಬಿಟ್ಟರೆ ಉಳಿದ ಭಾಗಗಳೆಲ್ಲಾ ಬಹುಮಟ್ಟಿಗೆ ಲಲಿತವಾಗಿಯೂ ಆಹ್ಲಾದಮಯವಾಗಿಯೂ ಪ್ರಸನ್ನಪೂರ್ಣವಾಗಿಯೂ ಇವೆ. ವರ್ಣನೆಗಳು ಸೊಗಸಾಗಿ ಪದಲಾಲಿತ್ಯ ಆಕರ್ಷಕವಾಗಿದೆ. ಸ್ವಭಾವೋಕ್ತಿ ರೂಪಕಗಳು ಮನಮುಟ್ಟುವಂತಿವೆ. ಆಚಾರ್ಯರ ಶಬ್ದಸಂಪತ್ತಿಯನ್ನು ಮೀರುವುದಕ್ಕಂತೂ ಯಾರಿಂದಲೂ ಸಾಧ್ಯವಿಲ್ಲ. ಕಾಳೀಯ ಮರ್ದನದ ಈ ಶ್ಲೋಕ ಅತ್ಯಂತ ಪ್ರಸಿದ್ಧವಾಗಿದೆ.

ಲೋಲಾಪತಚ್ಚರಣ ಲೀಲಾಹತಿಕ್ಷರಿತ
ಹಾಲಾಹಲೇ ನಿಜಫಣೇ
ನೃತ್ಯಂತಮಪ್ರತಿಘ ಕೃತ್ಯಂತಮಪ್ರತಿಮ
ಮತ್ಯಂತಚಾರುವಪುಷಂ
ದೇವಾದಿಭಿಸ್ಸಮಯ ಸೇವಾದರತ್ವರಿತ
ಹೇವಾಕಘೋಷ ಮುಖರೈಃ
ದೃಷ್ಟ್ವಾವಧಾನಮಥ ತುಷ್ಟಾವ
ಶೌರಿಮಹಿರಿಷ್ಟಾವರೋಧ ಸಹಿತಃ

"ಲೀಲೆಯಿಂದ ಚಂಚಲವಾದ ಪಾದಾಘಾತದಿಂದ, ವಿಷ ವನ್ನು ಸುರಿಸುತ್ತಿರುವ ತನ್ನ ಹೆಡೆಯಮೇಲೆ ನರ್ತನ ಮಾಡುತ್ತಿರುವ ಅಸದೃಶವಾದ ಕಾರ್ಯಸಾಹಸದಿಂಲೂ ಅತಿಸುಂದರವಾದ ದಿವ್ಯದೇಹದಿಂಲೂ ಕೂಡಿರುವ ಕೃಷ್ಣನನ್ನ, ಆ ಸಮಯಕ್ಕೆ ತಕ್ಕಂತೆ ಸ್ತೋತ್ರಗಳಿಂದ ಘೋಷಿಸಿ ಸೇವಿಸಿ, ದೇವತೆಗಳೆಲ್ಲ ಸಾವಧಾನದಿಂದ ನೋಡುತ್ತಿರುವಾಗ, ಆ ಕಾಳಿಂಗಸರ್ಪವೂ ತನ್ನ ಪರಿವಾರದಿಂದ ಕೂಡಿ ಕೃಷ್ಣನನ್ನು ಬಹುಮುಖವಾಗಿ ಸ್ತೋತ್ರಮಾಡಿತು. (ಶ್ರೀ ಡಿ. ಕೃಷ್ಣಯ್ಯಂಗಾರ್ಯರ ಅನುವಾದ)

ಮೇಲಿನ ಪದ್ಯದ ಧಾಟಿಯಲ್ಲಿ ಸಹ, ಕೃಷ್ಣನು ಸರ್ಪದ ಹೆಡೆಯಮೇಲೆ ನರ್ತಿಸುವ ಛಾಯೆ ಇದೆ. ಕವಿಗೆ ಸಹೃದಯನಾದ ವಿಮರ್ಶವ್ಯಾಖ್ಯಾನಕಾರ ಬೇಕು. ಅಲಂಕಾರ ಶಾಸ್ತ್ರವೇತ್ತರಾದ ಶ್ರೀ ಅಪ್ಪಯ್ಯದೀಕ್ಷಿತರು ವ್ಯಾಖ್ಯಾನಮಾಡುವವರೆಗೆ ಯಾದವಾಭ್ಯುದಯ ಜನತೆಯಲ್ಲಿ ಹೆಚ್ಚು ಪ್ರಚಾರವಾಗಿದ್ದಂತೆ ಕಾಣುವುದಿಲ್ಲ. ಅಪ್ಪಯ್ಯದೀಕ್ಷಿತರು--

ಇತ್ಥಂ ವಿಚಿಂತ್ಯಾಃ ಸರ್ವತ್ರ
ಭಾವಾಃ ಸಂತಿ ಪದೇ ಪದೇ
ಕವಿತಾರ್ಕಿಕಸಿಂಹಸ್ಯ
ಕಾವ್ಯೇಷು ಲಲಿತೇಷ್ವಪಿ

ಲಲಿತೇಷ್ವಪಿ (ಲಲಿತತವಾದ ಕಾವ್ಯಗಳೂ ಸಹ ಭಾವಪರಿಪುಷ್ಟವಾಗಿವೆ) ಎಂದಿದ್ದಾರೆ. ವರದರಾಜ ಪಂಚಾಶತಿಯಲ್ಲಿ ವೇದಾಂತದೇಶಿಕರು ನರಸಿಂಹಾವತಾರವನ್ನು ಹೀಗೆ ವರ್ಣಿಸಿದ್ದಾರೆ.

ಭಕ್ತಸ್ಯದಾನವಶಿಶೋಃ ಪರಿಪಾಲನಾಯ
ಭದ್ರಾಂ ನೃಸಿಂಹ ಕುಹವಾಮಧಿಜಗ್ಮುಷಸ್ತೆ,
ಸ್ತಂಭೈಕವರ್ಜಮಧುನಾಪಿ ಕರೀಶನೂನಂ
ತ್ರೈಲೋಕ್ಯಮೇವ ನಿಭೃತಂ ನರಸಿಂಹಗರ್ಭಮ್

"ಪರಮಾತ್ಮನು ಹಿರಣ್ಯಕಶಿಪುವಿನ ಅರಮನೆಯ ಒಂದು ಕಂಬದಲ್ಲಿ ಮಾತ್ರ, ದಾನವ ಶಿಶುವಾದ ಪ್ರಹ್ಲಾದನನ್ನು ರಕ್ಷಿಸಲು ಪ್ರತ್ಯಕ್ಷನಾದರೂ, ಆ ಕಂಬವಲ್ಲದೆ ಜಗತ್ತಿನ ಉಳಿದ ಎಲ್ಲ ಕಂಬಗಳಲ್ಲಿಯೂ ಅವನು ಇದ್ದೇ ಇದ್ದನು. ಆದರೆ ಅವನು ಪ್ರತ್ಯಕ್ಷನಾಗಬೇಕೆಂದು ಬಯಸುವ ಪ್ರಹ್ಲಾದನಂತಹ ಭಕ್ತರು ಮಾತ್ರ ಇರಲಿಲ್ಲ" ಎಂಬುದು ಈ ಪದ್ಯದ ಮುಖ್ಯ ಭಾವ.

ಹಂಸಸಂದೇಶವನ್ನು ವೇದಾಂತದೇಶಿಕರ ಒಂದು ಅತ್ಯುತ್ಕೃಷ್ಟ ಕಾವ್ಯವೆಂದು ನಿಸ್ಸಂದೇಹವಾಗಿ ಹೇಳಬಹುದು. ವಿರಹಿಗಳು ಪರಸ್ಪರವಾಗಿ ಸಂದೇಶಗಳನ್ನು ಕಳುಹಿಸಿ (ಅವು ತಲಪಲಿ ಬಿಡಲಿ) ಆ ಪ್ರಿಯಕರ್ಮದಲ್ಲಿಯೇ ಮನಸ್ಸಿಗೆ ನೆಮ್ಮದಿಯುಂಟುಮಾಡಿಕೊಳ್ಳುವುದು ಸ್ವಾಭಾವಿಕ. ಶ್ರೀರಾಮನು, ಆಂಜನೇಯನ ಮೂಲಕ ಸೀತಾದೇವಿಗೆ ಸಂದೇಶವನ್ನೂ ಚೂಡಾಮಣಿಯನ್ನೂ ಕಳುಹಿಸಿದುದು ಲೋಕ ವಿಖ್ಯಾತವೇ ಆಗಿದೆ. ನಳ ಮಹಾರಾಜನೂ ಹಂಸದ ದೌತ್ಯದಿಂದಲೇ ದಮಯಂತಿಯನ್ನು ಸಂಧಿಸಿದನು. ಇವುಗಳ ಸ್ಫೂರ್ತಿಯಿಂದಲೇ ಇರಬಹುದೇನೋ (ಅಥವಾ ಕವಿಗೆ ಯಾತರಿಂದ ಸ್ಫೂರ್ತಿ ಬರುವುದೋ ಬಲ್ಲವರಾರು ? ಶಂಕರೋ ವೇತ್ತಿ ವಾ ನವಾ) ಮಹಾಕವಿ ಕಾಳಿದಾಸನು ಮೇಘಸಂದೇಶವನ್ನು ಬರೆದನು. ವೇದಾಂತ ದೇಶಿಕರು, ಹನುಮಂತನಿಂದ ತನಗೆ ಸೀತೆಯ ಸಮಾಚಾರ ತಿಳಿದಮೇಲೆ, ರಾಮನ ವಿರಹವೇದನೆ ಇನ್ನೂ ಹೆಚ್ಚಾಗಿ ರಾಮನು ಸೀತೆಗೆ ಹಂಸದಮೂಲಕ ಸಂದೇಶವನ್ನು ಕಳುಹಿಸಿ ತನ್ನ ಮನಸ್ಸಿನ ನೋವನ್ನು ಸ್ವಲ್ಪ ಶಮನಕ್ಕೆ ತಂದುಕೊಂಡನೆಂಬ ಕಥಾಸಂದರ್ಭವನ್ನು ಕಲ್ಪಿಸಿಕೊಂಡು ಹಂಸಸಂದೇಶವನ್ನು ರಚಿಸಿದ್ದಾರೆ. (ಸಂಸ್ಕೃತ ಸಾಹಿತ್ಯದಲ್ಲಿ ಇನ್ನೂ ಕೋಕಿಲ ಸಂದೇಶ, ಮರುತ್ ಸಂದೇಶ, ಶುಕ ಸಂದೇಶ ಮುಂ. ತಾದ ಕಾವ್ಯಗಳಿದ್ದರೂ ಅವುಗಳ ಕರ್ತೃಗಳು ಅಷ್ಟು ರಸಜ್ಞರಲ್ಲವಾದುದರಿಂದ ಆ ಕಾವ್ಯಗಳು ಪ್ರಸಿದ್ಧವಾಗಿಲ್ಲ.)

ಹಂಸ ಸಂದೇಶವು ಕಾಳಿದಾಸನ ಮೇಘಸಂದೇಶದ ಮಾದರಿಯನ್ನು ಅನುಸರಿಸಿ ಬರೆದ ಕಾವ್ಯ ಎಂಬುದು ಸಂಭವವಾದರೂ, ಇದೊಂದು ಬಹುಮಟ್ಟಿಗೆ ವೇದಾಂತದೇಶಿಕರ ಸ್ವತಂತ್ರ ಕೃತಿಯೇ ಹೌದು. ಅನುಕರಣೆ, ಅತ್ಯುತ್ತಮ ಕವಿಯಲ್ಲದವನ ಕೈಯಲ್ಲಿ ಬರಿಯ ಅಗ್ಗದ ಸರಕು ಆಗುತ್ತದೆ. ಆದರೆ ಶ್ರೇಷ್ಠನಾದ ಕವಿಯು, ತನ್ನ ಸ್ವಶಕ್ತಿ ವಾಕ್ ಪ್ರೌಢಿಮೆ ವರ್ಣನಾಸಾಮರ್ಥ್ಯ ಕಾವ್ಯಸಂದೇಶ, ಅಲಂಕಾರ ಆಹ್ಲಾದ ಶಕ್ತಿಗಳಿಂದ (ಹೆಸರಿನಲ್ಲಿ ಮತ್ತು ವಿಷಯದ ಆರಿಸುವಿಕೆಯಲ್ಲಿ ಸಹ ಏಕತೆ ಇದ್ದರೂ) ತನ್ನ ವಿಶಿಷ್ಟಶಕ್ತಿಯಿಂದಲೇ ತಾನು ಆರಿಸಿಕೊಂಡ ಮಾದರಿಗೆ ಸರಿಸಮವಾಗಿ ನಿಲ್ಲಬಲ್ಲ. ಕೆಲವೆಡೆ ತನ್ನ ತನದಿಂದ ಅದನ್ನೂ ಮೀರಿಸಬಲ್ಲ ಕಾವ್ಯವನ್ನು ಸೃಷ್ಟಿಸುತ್ತಾನೆ. ಮತ್ತೊಬ್ಬರ ಕೈಯಲ್ಲಿ ಕೇವಲ ನೀರಸ ಅನುಕರಣ ಪಟುತೆಯ ಶುಷ್ಕಸಾಲುಗಳಾಗಬಹುದಾಗಿದ್ದುದು, ವೇದಾಂತದೇಶಿಕರ ಅನ್ಯಾದೃಶಶಕ್ತಿಯಿಂದ, ತಾನೂ ಒಂದು ಆಕರ್ಷಣೀಯವಾದ ಸ್ವತಂತ್ರ "ಅನನ್ಯ ಪರತಂತ್ರಾಂ ಆಹ್ಲಾದಮಯಿಾಂ" ಕಾವ್ಯವೇ ಆಗಿದೆ. ಕವಿ ಈ ಕಾವ್ಯಕ್ಕೆ ಬಹು ಒಳ್ಳೆಯ ವಾತಾವರಣವನ್ನು ಸೃಷ್ಟಿಸಿದ್ದಾರೆ. ರಾಜಹಂಸ ದೌತ್ಯಕಾರ್ಯಕ್ಕೆ ಹೊರಡುವುದು ಶುಭವಾದ

ಶರತ್ಕಾಲದಲ್ಲಿ. ಹುಣ್ಣಿಮೆಯ ಚಂದ್ರನಂತೆ ಕಾಂತಿಯುಳ್ಳ ಅದು, ಮಾನಸ ಸರೋವರದಿಂದ ರಾಮನಿದ್ದಲ್ಲಿನ ಕಮಲ ಸರಸ್ಸಿಗೆ ಬಂದಿದೆ, ಕ್ರೀಡಿಸುತ್ತಿದ್ದ ಅದರ ನಡಿಗೆ, ಸೀತೆಯ ನಡಿಗೆಯಂತೆ ಉತ್ತಮವಾಗಿದೆ. ಅದರ ಮೈ ಸೀತೆಯದುಕೂಲದಂತೆ ಥಳಥಳಿಸುತ್ತಿವೆ. ಅದರ ಧ್ವನಿ ಸೀತೆಯ ಮಂಜೀರದ (ಕಾಲಂದುಗೆ) ಧ್ವನಿಯಂತೆ ಇದೆ. ಅದನ್ನು ನೋಡಿ ಸೀತೆಯ ಜ್ಞಾಪಕ ಒಂದು ರಾಮನು ಅದರಲ್ಲಿಯೇ ನೆಟ್ಟಕಣ್ಣಿಟ್ಟ ಮನಸ್ಸು ಉಳ್ಳವನಾದನು. ಅನುಕೂಲ ಸನ್ನಿವೇಶದಿಂದ ಆತನ ಮನಸ್ಸಿನಲ್ಲಿ ಸೀತಾ ವಿರಹ ತಾಪ ಹೆಚ್ಚಾಯಿತು.

ಮುಂದೆ ಕವಿ, ಹಂಸಕ್ಕೆ ಲಂಕೆಯ ದಾರಿಯನ್ನು ವಿವರಿಸುತ್ತಾರೆ. ದೇಶ ಪ್ರೇಮದಿಂದ ದಕ್ಷಿಣ ದೇಶದ ಮಹಿಮೆ ಪವಿತ್ರಸ್ಥಳಗಳು, ಇಲ್ಲಿನ ಜನತೆಯ ಉತ್ಕರ್ಷ ಎಲ್ಲವನ್ನೂ ಹೇಳುತ್ತಾರೆ. "ಚೋಳ ದೇಶ ಅಡಕೆಮರಗಳ ಗುಂಪಿನಿಂದ, ದೂರದಿಂದಲೇ ಕಪ್ಪಾಗಿ ತೋರುತ್ತವೆ. ಅಲ್ಲಿ ಕಾವೇರಿನದಿ ಮೆಲ್ಲಮೆಲ್ಲನೆ ಹರಿಯುತ್ತದೆ. ಅಡಿಕೆ ತೋಟಗಳಲ್ಲಿ ಮಂದ ಮಾರುತ, ಅನೇಕ ವರ್ಣದ ಪುಷ್ಪ ಧೂಳುಗಳಿಂದ ಚಿತ್ರ ವಿಚಿತ್ರಗಳಾದ ಬಣ್ಣದ ಮೇಲು ಕಟ್ಟನ್ನು ಕಟ್ಟುವುದು, ಹೂಗೊಂಚಲೆಂಬ ಚಾಮರವನ್ನು ಹಿತಕರವಾಗಿ ಬೀಸುವುದು, ಹೆಜ್ಜೆಯಿಡಲು ಹಿತವಾಗುವಂತೆ ನೆಲದ ಮೇಲೆ ಹೂಗಳ ರಾಸಿಯನ್ನೇ ಎಸೆಯುವುದು. ನದಿ, ಆ ಭಾಗದಲ್ಲಿ ತುಂಬಾ ಆಳವಾಗಿರುವುದರಿಂದಲೂ ಅಲ್ಲಿ ಮೊಸಳೆಗಳ ತಿರುಗಾಟ, ಹೆಚ್ಚಾಗಿರುವುದರಿಂದಲೂ, ನದಿ ವೇಗವಿಲ್ಲದೆ ಹರಿಯುವಂತೆ ತೋರುವುದು. ಅಲ್ಲಿ ಸಣ್ಣ ಸಣ್ಣ ಪ್ರವಾಹಗಳಾಗಿ ಹೊಲಗದ್ದೆಗಳಿಗೆ ಅಮೃತವನ್ನು ಉಣಿಸಿ, ತಣಿಸಿ ಉಪಕಾರಮಾಡಿ ನದಿ ಮುಂದೆ ಹೋಗುತ್ತದೆ. ಅಲ್ಲಿನ ಸ್ತ್ರೀಯರೊ? ಆ ಕಮಲಾಕ್ಷಿಯರು ಅರಿಷಿಣ ಮಿಶ್ರವಾದ ಯಕ್ಷಕರ್ದಮವೇ ಮೊದಲಾದ ಸುಗಂಧ ದ್ರವ್ಯಗಳನ್ನು ಹಚ್ಚಿಕೊಂಡು ಸಾಯಂಸಂಧ್ಯಯರಂತೆ ಕೆಂಪಗೆ ಕಂಗೊಳಿಸುತ್ತಾ ತಮ್ಮ ಜಡೆಗಳಿಗೆ ಅಡಿಕೆ ಹೂವುಗಳನ್ನು ಮುಡಿದು ಬೆಳದಿಂಗಳನ್ನು ಇದಿರಿಸುವ ಕತ್ತಲೆಯನ್ನು ಧರಿಸಿದಂತಿರುವವರು, ನಿನ್ನ ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಾರೆ. ಯೌವನದ ಮನ್ಮಥ ವಿಕಾರದಿಂದ ಅವರು ಆಡುವ ಸವಿನುಡಿಗಳು, ಅರ್ಥವಿಲ್ಲದುವಾದರೂ ಇಂಪಾದ ಧ್ವನಿಯುಳ್ಳ ಆ ಅಂಬುಜಾಕ್ಷಿಯರು, ಉಯ್ಯಾಲೆಯಮೇಲೆ ವಿನೋದಮಾಡುತ್ತಾ ಕುಳಿತಿರುವಾಗ ನಿನಗೆ ತಪ್ಪದೆ ಆನಂದವುಂಟುಮಾಡುತ್ತಾರೆ. ನಿನಗೆ ಆಶ್ರಯಕೊಡುವ ಇಚ್ಛೆಯಿಂದಲೋ ಎಂಬಂತೆ ಸ್ವಲ್ಪಮಟ್ಟಿಗೆ ಮೇಲಕ್ಕೆದ್ದ ಪುಳಿನ ಪ್ರದೇಶಗಳಾಗಿ ಅಂಜನಾಚಲಕ್ಕೆ ದಕ್ಷಿಣದಲ್ಲಿ ಹರಿಯುವ ಕನಕಮುಖರೀ ಎಂಬ ನದಿ, ಅಲೆಗಳೆಂಬ ಕೈಗಳಿಂದ ಸಮೀಪದಲ್ಲಿರುವ, ಅರಣ್ಯ ವೃಕ್ಷಗಳ ಹೂಗಳನ್ನು, ಅರ್ಧಚಂದ್ರ ಚೂಡಾಮಣಿಯಾದ ಹರನ ಪೂಜೆಗಾಗಿ ಒಯ್ಯುತ್ತಿರುವಂತೆ ತೋರುತ್ತದೆ."

ಕವಿ, ತುಂಬ ಪ್ರೀತಿಯಿಂದ ಕಾವೇರಿಯ ವರ್ಣನೆಯನ್ನು ಮಾಡುತ್ತಾರೆ. "ಸಹ್ಯಪರ್ವತದ ತಪ್ಪಲು ಪ್ರದೇಶದಿಂದ ಹೊರಟು ವಾಯುವಿನ ಜತೆಯಲ್ಲಿಯೇ ಸಮುದ್ರಕ್ಕೆ ಹೋಗುತ್ತಿರುವ ಕಾವೇರಿ ನದಿಯನ್ನು ನಿನ್ನಂತಹ ಮಧು ಮಧುರ ಧ್ವನಿಗಳುಳ್ಳ ಪಕ್ಷಿಗಳು ಶುಭಕರಗಳಾದ ಮಾತುಗಳಿಂದ ಕುಶಲ ಪ್ರಶ್ನೆಮಾಡುತ್ತವೆ. ಚೋಳ ದೇಶದ ಅಡಕೆ ಮರಗಳ ತೋಟಗಳಲ್ಲಿ ಮಂದಹಾಸದ ಕುಡಿಯೋ ಎಂಬಂತೆ ಮೆಲ್ಲ ಮೆಲ್ಲನೆ ಪಸರಿಸುವ ಈ ಕಾವೇರಿನದಿಯನ್ನು ಬೆಳ್ಳಗಿನ ಜಾವದಲ್ಲಿ ಅಡಕೆ ಮರಗಳು ಹೊಂಬಾಳೆಯೊಡೆದು ಗಾಳಿಯಿಂದ ತೂರುತ್ತಿರುವ ಸಣ್ಣ ದಳಗಳಿಂದ ಕೂಡಿದ ಸುವಾಸನೆಯುಳ್ಳ ಗಾಳಿಯಿಂದ ಉಪಚರಿಸುತ್ತವೆಯೋ ಎಂಬಂತೆ ತೋರುತ್ತಿದೆ; ಚೋಳದೇಶವನ್ನು, ಗಂಗೆಗಿಂತ ಮಿಗಿಲಾಗಿರುವ ಕಾವೇರಿ ಇಬ್ಭಾಗವಾಗಿ ಮಾಡಿ ಪ್ರವೇಶಿಸುತ್ತದೆ. ಅದರ ತೀರದಲ್ಲಿ ಬೆಳೆದು ಕಾಲಕಾಲಕ್ಕೆ ಫಲಕ್ಕೆ ಬರುವ ಪಟಾಪಟಿ ಕಬ್ಬಿನ ಗಿಣ್ಣುಗಳು ಬಿರಿಯುವುವು. ಇದರಿಂದ ಮುತ್ತುಗಳು ಎಲ್ಲೆಲ್ಲೂ ಸುರಿದು ಸ್ವಚ್ಛವಾದ ಮರಳಿನ ರಾಶಿಯಂತೆ, ಕಾವೇರಿನದಿ ಹಳ್ಳತಿಟ್ಟಾಗಿ ಕಾಣುವುದು (ಪಟಾಪಟಿ ಕಬ್ಬಿನ ಗಿಣ್ಣಿನಲ್ಲಿ ಮುತ್ತು ಉತ್ಪತ್ತಿಯಾಗುವುದೆಂದು ಪ್ರತೀತಿ) ದೇವ ಸ್ತ್ರೀಯರು ಅಲ್ಲಿ ಸ್ನಾನ ಮಾಡುವುದರಿಂದ ಅವರ ತಲೆಗೂದಲಿನ ವಾಸನೆಯಿಂದ ಅದರ ನೀರು ಪರಿಮಳಯುಕ್ತವಾಗಿದೆ."

ಇವರು ತಮಿಳುನಾಡಿನವರಾದರೂ ಕರ್ನಾಟಕ ಆಂಧ್ರದೇಶಗಳು ಇವರಿಗೆ ಪ್ರಿಯವಾದುವು. ಹಂಸಸಂದೇಶದಲ್ಲಿ ಒಂದೆಡೆ ಕವಿ, ಹೀಗೆ ಹೇಳುತ್ತಾರೆ. "ಎಲೈ ಹಂಸವೇ, ಕಬ್ಬಿನ ನೆರಳಿನಲ್ಲಿ ಚೆಗುರಿನ ಹಾಸಿಗೆಗಳಲ್ಲಿ ಕುಳಿತುಕೊಂಡು, ಮನ್ಮಥ ವಿಕಾರದಿಂದ ಕದಡಿದ ಮನಸ್ಸುಳ್ಳ ಸುಂದರಿಯರು, ಕಿವಿಗಿಂಪಾದ ನಾನಾ ಗೀತಗಳನ್ನು ಹಾಡುತ್ತಾ ಪ್ರೀತಿಪೂರ್ಣ ಮನಸ್ಸುಳ್ಳವರಾಗಿದ್ದಾರೆ. ಅವರು ಕರ್ನಾಟಕ ಆಂಧ್ರದೇಶದಲ್ಲಿ ವ್ಯವಹಾರದಲ್ಲಿರುವ ಗೀತಾಲಾಪಗಳ ಪರಸ್ಪರ ಸಮ್ಮೇಳನದಿಂದ ಸೊಗಸಾಗಿರುವ ಹಾಡುಗಳಿಂದ, ಸಂಪೂರ್ಣಾನಂದವನ್ನು ಅನುಭವಿಸುತ್ತಾ, ಭತ್ತದ ಪೈರನ್ನು ತಿಂದು ಹಾಳು ಮಾಡಲು ಬರುವ ಪಕ್ಷಿಗಳನ್ನು ಓಡಿಸುತ್ತಿರುವರು. ಇಂತಹ ರಮಣಿಯರ ಮುಗ್ಧಾವಸ್ಥೆಯನ್ನು ನೋಡಿ ಸಂತೋಷಿಸು, [ಈ ಪದ್ಯ, ವೇದಾಂತದೇಶಿಕರ ವ್ಯವಪರಿಚಯವನ್ನೂ ತೋರಿಸುತ್ತದೆ. ರೈತರ ಹೆಣ್ಣು ಮಕ್ಕಳು ಹೊಲಗದ್ದೆಗಳಲ್ಲಿ ಕಾಯುತ್ತಾ ತೆಲುಗು ಕನ್ನಡ ಎರಡರ ರಾಗಿಬೀಸುವ ಪದಗಳು, ಗಾಡಿ ಪದಗಳು, ವ್ಯಂಗ್ಯ ವಿನೋದ ಚಾಟೂಕ್ತಿಗಳು ಇವುಗಳಿಂದ ಪರಸ್ಪರರನ್ನು ಕೆಣಕುತ್ತಾ, ರಾರಾ ಮುದ್ದುಲಗುಮ್ಮ ಹೋರಿಯಮೇಲೆ ಕೂತು ಕೋರ್ಹುಡುಗಿನಾ ಕಂಡೆ ಊರ್ವಸಿಯಂತ ಮೊಗದವಳ - ಮುಂತಾದುವನ್ನು ಹಾಡುವ ನೋಟ ನಿತ್ಯಗೋಚರವಾಗಿದೆ.]

ಮಾಲ್ಯವಂತ ಪರ್ವತದ ಶಿಖರದ ಮೇಲೆ ಕುಣಿಯುವ ನವಿಲಿನ ವರ್ಣನೆ ಮನೋಹರವಾಗಿದೆ. "ಮೌಲ್ಯವಂತಪರ್ವತದ ಶಿಖರವು, ವಾಯು ಎರಚಿದ ದೆಟ್ಟಮಲ್ಲಿಗೆಯ ಹೂಗಳಿಂದ ಪರಿಮಳಿತವಾಗಿದೆ; ತಡೆಯಿಲ್ಲದೆ ಮನೋಹರವಾಗಿ ಗುಡುಗುತ್ತಿರುವ ಮೋಡಗಳ ಮೇಲೆ, ಮಿಂಚುಗಳೆಂಬ ಚಿನ್ನದ ಬಾಜಿಸುವ ಕೋಲುಗಳ ಏಟಿನಿಂದಾಗುವ ಸದ್ದನ್ನು ಅನುಸರಿಸಿ, ಅಲ್ಲಿ ಕುಣಿಯಲು ಇಷ್ಟಪಡುವ - ರಾವಣನಿಂದ ಅಪಹರಿಸಲ್ಪಡುವ ತೊಂದರೆಯಿಲ್ಲದಿರುವ ಪ್ರಿಯ ಮಯೂರಿಯ ಆಶ್ಲೇಷದಿಂದ ಪುಣ್ಯಶಾಲಿಯಾದ ಗಂಡು ನವಿಲು......" (ಇಲ್ಲಿ ಒಂದು ಸೊಗಸಾದ ಅಲಂಕಾರ ಸೂಚಿತವಾಗಿದೆ; ಮೋಡ ಧ್ವನಿಯೇ ನೃತ್ಯಗೀತ, ಗಾನ ತಾಳಮದ್ದಲೆ, ನಿರ್ಭಯವಾಗಿ ಸಂತೋಷದಿಂದ ಕುಣಿಯುವ ನರ್ತಕರೇ ನವಿಲುಗಳು.)

ಮುಂದೆ ಕವಿ, ಪಾಂಡ್ಯದೇಶದ ವರ್ಣನೆಯನ್ನು ಮಾಡುತ್ತಾರೆ. ಪಾಂಡ್ಯ ಸ್ತ್ರೀಯರನ್ನು ಕವಿ, ಹೀಗೆ ವರ್ಣಿಸಿದ್ದಾರೆ; "ಪಾಂಡ್ಯ ದೇಶದ ಸುಂದರಿಯರು ನೈದಿಲೆಗಳಂತೆ ಮನೋಹರವಾದ ಕಣ್ಣುಗಳುಳ್ಳವರು. ತಲೆಯಲ್ಲಿ ಹೂವನ್ನು ಸಡಿಲವಾಗಿ ಮುಡಿಯುತ್ತಾರೆ, ಅವರ ಮುಂಗುರುಳು ಅಲುಗಾಡುತ್ತಿವೆ, ರತ್ನಖಚಿತವಾದ ಓಲೆಗಳನ್ನು ಧರಿಸಿರುತ್ತಾರೆ, ಪ್ರಕಾಶವಾದ ಮುತ್ತಿನ ಪುಡಿಯಿಂದ ತಿಲಕವನ್ನು ರಚಿಸಿಕೊಂಡಿರುತ್ತಾರೆ. ಇಂತಹ ರಮಣಿಯರು ಮುಖಗಳನ್ನು ಮೇಲಕ್ಕೆತ್ತಿ ನೈದಿಲೆ ಹೂವಿನ ಮಾಲೆಯಂತೆ ಬಹುದೂರ ವ್ಯಾಪಿಸಿರುವ ಕಟಾಕ್ಷಗಳಿಂದ, ಕಿವಿಗಿಂಪಾಗಿ ಕೂಗುತ್ತಿರುವ ನಿನ್ನನ್ನು ಕುತೂಹಲದಿಂದ ಗೌರವಿಸುತ್ತಾರೆ."

ಪಾಂಡ್ಯ ದೇಶದ ಸಮೃದ್ಧಿಯನ್ನೂ ಸುವೃಷ್ಟಿಯನ್ನೂ ತಿಳಿಸಲು ಕವಿ, ಒಂದು ಕಥೆ ಹೇಳುತ್ತಾರೆ. "ಪಾಂಡ್ಯ ದೇಶದ ರಾಜನೊಬ್ಬನು ತುಂಬ ಈಶ್ವರಭಕ್ತನಾಗಿದ್ದನಂತೆ. ಅವನು ಈಶ್ವರನ ಅನುಗ್ರಹದಿಂದ ದಿವ್ಯಾಸ್ತ್ರಗಳನ್ನು ಪಡೆದು, ಪರಾಕ್ರ

ಮಕ್ಕೂ ಜನತೆಯ ಕಲ್ಯಾಣಕ್ಕೂ ಇದೇ ಸರಿಯಾದ ಮಾರ್ಗವೆಂದು ಮಳೆಗಳ ಅಭಿಮಾನದೇವತೆಗಳನ್ನೆಲ್ಲ ಕೈಸೆರೆ ಹಿಡಿದು ಕಾರಾಗಾರದಲ್ಲಿ ಹಾಕಿದನು. ಆಗ ದೇವತೆಗಳು ಬಹಳ ಕಷ್ಟವನ್ನು ಅನುಭವಿಸಬೇಕಾಯಿತು. ಅನಂತರ ರಾಜನು ಕಾಲ ಕಾಲಕ್ಕೆ ಮಳೆ ಹುಯ್ಯಬೇಕೆಂದು ಕಟ್ಟುಮಾಡಿ ಅವರನ್ನೆಲ್ಲ ಬಿಡುಗಡೆ ಮಾಡಿದನು. ಈಚೆಗೆ ಅವರು ಆ ಸೆರೆವಾಸದ ಕಷ್ಟಗಳನ್ನು ನೆನೆದು, ಕಾಲಕಾಲಕ್ಕೆ ಬೇಕಾದಷ್ಟು ಮಳೆಯನ್ನು ತಪ್ಪದೆ ಸುರಿಸುತ್ತಿದ್ದಾರಂತೆ. ಅಲ್ಲಿ ಗ್ರಾಮಗಳೂ ನಗರಗಳೂ ಕುದೇರನ ರಾಜಧಾನಿಯೊಂದಿಗೆ ಪೈಪೋಟಿ ನಡೆಸುತ್ತಿವೆ. ಆ ದೇಶದ ಗ್ರಾಮಗಳೂ ನಗರಗಳೂ ಒಂದೇ ರೀತಿ ಏಳಿಗೆಯಲ್ಲಿವೆ" ಲಂಕೆಯ ಸ್ತ್ರೀಯರನ್ನು ವರ್ಣಿಸುವಾಗ ಕವಿ "ಅವರು ಹಂಸಗಳಂತೆ ನಡಿಗೆಯುಳ್ಳವರು; ಅವರು ಧರಿಸಿರುವ ಆಭರಣಗಳ ಅಲುಗುವಿಕೆಯ ಧ್ವನಿ ಕಿವಿಗೆ ಇಂಪಾಗಿರುವುದು; ಅರವಿಂದ ಸುಂದರ ನಯನೆಯರು; ಮನೋಹರವಾದ ಬಾಣಗಳಂತೆ ಕಣ್ಣುಳ್ಳವರು; ವಿರಹಾತಿಶಯದಿಂದ ಬೆಳ್ಳಗಾಗಿ ಮಧುರ ವಚನಗಳನ್ನು ಆಡುವವರು" ಎನ್ನುತ್ತಾರೆ.

ಕವಿ, ಲಂಕೆಯ ವರ್ಣನೆಯನ್ನು ಮಾಡುವಲ್ಲಿ ಒಂದು ಚಮತ್ಕಾರವನ್ನು ತೋರಿಸಿದ್ದಾರೆ. ಇಂದಿನ ಕಾಲದಲ್ಲಿ ಒಂದು ದೇಶದಲ್ಲಿರುವ ಪರದೇಶಿಯರು, ಅಥವಾ ಪರದೇಶಿ ರಾಯಭಾರಿವರ್ಗದವರು, ಏನಾದರೂ ತೊಂದರೆಯುಂಟಾದರೆ ಕೂಡಲೇ ಆ ದೇಶವನ್ನು ಬಿಟ್ಟು ಸ್ವದೇಶಾಭಿಗಮನಕ್ಕಾಗಿ ವಿಮಾನಗಳನ್ನು ಇಟ್ಟುಕೊಂಡು ಸಿದ್ಧವಾಗಿರುವುದು ಸರಿಯಷ್ಟೆ, ಹಾಗೆಯೇ "ಲಂಕೆಯ ಮಧ್ಯ ಭಾಗದಲ್ಲಿ ರಾವಣನ ಅರಮನೆ ಇದೆ. ಅಲ್ಲಿ ರಾವಣ ದೇವತಾ ಸ್ತ್ರೀಯರನ್ನು ಬಂಧಿಸಿದ್ದಾನೆ. ಅರಮನೆಯ ಮೇಲೆ, ಯಾವಾಗಲೂ ವಿಮಾನಗಳು ದೇವತಾಸ್ತ್ರೀಯರನ್ನು ಅವರ ಸ್ಥಳಗಳಿಗೆ ಕರೆದುಕೊಂಡು ಹೋಗುವುದಕ್ಕಾಗಿಯೂ ಅವರನ್ನು ರಕ್ಷಿಸಲೂ ಹಾರಾಡುತ್ತಿವೆ." ಕವಿ, ರಾವಣನ ಅಂತಃಪುರವನ್ನೂ ಸೊಗಸಾಗಿ ವರ್ಣಿಸಿದ್ದಾರೆ. "ರಾವಣನ ಉದ್ಯಾನದಲ್ಲಿ ವಾಯು ಅವನಿಗೆ ಹೆದರಿ ಮೆಲ್ಲಗೆ ಬೀಸುತ್ತದೆ. ಸೂರ್ಯನು ಹೆಚ್ಚು ಬಿಸಿಲನ್ನು ಬಿಡದೆ ಚಂದ್ರನಂತಾಗಿದ್ದಾನೆ. ಬೇರೆ ಬೇರೆ ಋತುಗಳಲ್ಲಿ ಕಾಣುವ ಹೂ ಹಣ್ಣು ಚಿಗುರು ಎಲ್ಲ ಏಕ ಕಾಲದಲ್ಲಿ ಇವೆ. ಅಶೋಕ ವೃಕ್ಷಗಳು ತಮ್ಮ ಕೆಂಬಣ್ಣದ ಹೂಗೊಂಚಲುಗಳಿಂದ, ಸೀತೆಯ ದುಃಖಾಗ್ನಿಗಳಂತೆ ಕಂಗೊಳಿಸುತ್ತಿವೆ. ಇಂತಹ ಉದ್ಯಾನವು ಮೊದಲು ಆಂಜನೇಯನಿಂದಲೇ ಭಂಗಗೊಳಿಸಲ್ಪಟ್ಟಿತು." ಕವಿಯು ಬಂಧಿತಳಾದ ಸೀತೆಯನ್ನು ರಾಮನ ಬಾಯಿನಲ್ಲಿ ಕಾರುಣ್ಯಕ್ಕೆ ಈಡಾದ ಮೂರ್ತಿಯಾಗಿ ವರ್ಣಿಸಿದ್ದಾರೆ. "ಯಜ್ಞ ಭೂಮಿಯನ್ನು ನೇಗಿಲಿನಿಂದ ಉಳುವಾಗ ಸಿಲುಕಿದವಳು, ರಾಕ್ಷಸರೇ ಮೊದಲಾದ ಕ್ರೂರಾತ್ಮರ ಸಮೀಪದಲ್ಲಿದ್ದರೂ, ಪಾತಿವ್ರತ್ಯಾದಿ ತನ್ನ ಪ್ರಭಾವದಿಂದಲೇ ನಿರ್ಭೀತಳಾಗಿರುವವಳು; ವಿಶ್ವಾಮಿತ್ರನೊಡನೆ ಜನಕರಾಜನ ಪಟ್ಟಣಕ್ಕೆ ನಾನು (ರಾಮ) ಪ್ರವೇಶಿಸಿದಾಗ, ಭಾಗ್ಯಶಾಲಿಯಾದ ನನ್ನಿಂದ ಧನುರಾರೋಹಣವೆಂಬ ಪ್ರಬಲವಾದ ಪ್ರಯತ್ನದಿಂದ ಪ್ರಾಪ್ತಳಾಗಿ ಸೂರ್ಯವಂಶಕ್ಕೆ ಕಾಂತಿಯನ್ನುಂಟುಮಾಡುವ ಸ್ವರ್ಗೀಯವಾದ ರತ್ನದಂತಿರುವವಳು. "ತಾನು ಧನುಸ್ಸನ್ನು ಆರೋಹಿಸಿದುದರಿಂದ ತನಗೆ ಸೀತೆ ದೊರೆತುದರಿಂದ ತಾನೇ ಭಾಗ್ಯಶಾಲಿಯೆಂದು ರಾಮ ಹೇಳುತ್ತಾನೆ. ಪರಮ ಕಾಂತಿಯುತವಾದ ಸೂರ್ಯವಂಶಕ್ಕೇ ಆಕೆ ಕಾಂತಿಯನ್ನು ಉಂಟುಮಾಡುವವಳೆಂದು ಹೇಳುತ್ತಾನೆ. ಪ್ರಿಯನಿಗಾಗಿ ತಾನು ಎಷ್ಟೇ ಕಷ್ಟಪಟ್ಟರೂ ಪ್ರಿಯನ ಬಾಯಿಂದ ಇಂತಹ ಹೊಗಳಿಕೆಯನ್ನು ಕೇಳಿ, ಯಾವ ಸ್ತ್ರೀ ತಾನೇ ಆನಂದಗೊಳ್ಳುವುದಿಲ್ಲ! ಶ್ರೀರಾಮನು ಸೀತೆಯನ್ನು ಹೀಗೆ ಹಂಸದೊಂದಿಗೆ ವರ್ಣಿಸುತ್ತಾನೆ. "ಸೀತೆ, ಮೀನುಗಳಂತೆ ಕಣ್ಣುಗಳುಳ್ಳವಳು, ಹುಬ್ಬುಗಳು ಧನುಸ್ಸಿನಂತೆ ಬಾಗಿವೆ, ಸುಕೇಶಿ, ಕೃಶಾಂಗೀ ತುಂಗಸ್ತನಭಾರದಿಂದ ಸ್ವಲ್ಪ ಬಗ್ಗಿದ್ದಾಳೆ, ಅವಳ ಮೈಕಾಂತಿ ಪುಟಕ್ಕೆ ಹಾಕಿದ ಸುವರ್ಣದಂತಿದೆ; ಆಕೆ ಹಂಸಯಾನೆ; ಸಿಂಹಮಧ್ಯೆ, ಮನೋಹರಗಳಾದ ಅವಯವಗಳುಳ್ಳವಳು, ಶೃಂಗಾರಾಭಿಮಾನದೇವತೆ, ಆಕೆ ನನ್ನ ಕಣ್ಣು ಮತ್ತು ಭಾಗ್ಯವೇ ಆಗಿದ್ದಾಳೆ".

ಅಶೋಕವನದಲ್ಲಿ ಸೀತೆ ಹೇಗಿರಬಹುದೆಂಬುದನ್ನು ಶ್ರೀರಾಮನ ಬಾಯಲ್ಲಿ ಆಚಾರ್ಯರು ಹೀಗೆ ಹೇಳಿಸಿದ್ದಾರೆ. "ನಿಂದ್ಯನಾದ ಶ್ವಪಚಗೃಹದಲ್ಲಿ ಬಿದ್ದ ವಿಶುದ್ಧ ಚಂದ್ರಪ್ರಕಾಶದಂತೆಯೂ, ವಿಷವೃಕ್ಷಗಳ ವನದಲ್ಲಿ ತಂದಿಡಲ್ಪಟ್ಟ ಪಾರಿಜಾತದ ಶಾಖೆಯಂತೆಯೂ ದುರ್ಜನರ ಸಭೆಯಲ್ಲಿ ಹೇಳಲ್ಪಡುವ ಸತ್ಕವಿಯ ಸೂಕ್ತಿಯಂತೆಯೂ, ರಾಕ್ಷಸರ ಮಧ್ಯದಲ್ಲಿರುವ ಮಿಥಿಲ ರಾಜ ಪುತ್ರಿಯಾದ ಸೀತೆ ಬಹು ದೀನತೆಯಿಂದ ಇದ್ದಾಳೆಂದು ನಾನು ಊಹಿಸುತ್ತೇನೆ." (ಶ್ರೀ ಡಿ. ಕೃಷ್ಣಯ್ಯಂಗಾರ್ಯರ ಅನುವಾದ) ಈ ಸೊಗಸಾದ ಭಾವಗೀತೆಯಲ್ಲಿ ರಾಮನು, ಹಂಸದ ಮೂಲಕ ಸೀತಾದೇವಿಗೆ ಹೀಗೆ ಹೇಳಿಕಳುಹಿಸುತ್ತಾನೆ– "ಪ್ರಿಯೆ ಯಾವ ರಾತ್ರಿಯು, ನಿಸ್ಸೀಮವಾದ ಪ್ರಣಯದಿಂದ ಪರವಶರಾಗಿದ್ದ ನಮಗೆ, ಆಲಿಂಗನಾದಿ ವ್ಯಾಪಾರದಿಂದ ಒಂದರಕ್ಷಣದಂತೆ ಕಳೆದುಹೋಯಿತೋ, ಈಗ ನಮ್ಮ ಈ ವಿರಹದಿಂದ ಸಂಕಲ್ಪ ಕಲ್ಪಿತಗಳಾದ ಅಂತಹ ಅನೇಕ ಆಲಿಂಗನಾದಿಗಳಿಂದಲೂ ಭಾವಗಳಿಂದಲೂ ಅಂತಹ ರಾತ್ರಿಯು ಅತಿ ದೀರ್ಘವಾಗಿ ಸಂತಾಪಕ್ಕೆ ಕಾರಣವಾಗಿದೆ." ರಾಮನು ಸೀತಾದೇವಿಗೆ ಹೀಗೂ ಹೇಳಿಕಳುಹಿಸುವನು -- "ನಿನ್ನ ದೇಹವನ್ನು ಹೇಗೋ ಕಷ್ಟದಿಂದ ಕಾಪಾಡಿಕೊ. ನಿನ್ನ ಆತ್ಮಧಾರಣವು ನನ್ನ ಆತ್ಮಾರಾಧನೆಗೆ ಕಾರಣವಾಗುವುದು. ನನಗೆ ನಿನ್ನ ಹೊರತು ದೇಹಧರಿಸಲು ಸಾಮರ್ಥ್ಯವಿಲ್ಲ. ಗುಣವಂತಳೇ! ನೀನು ನಿನ್ನನ್ನು ರಕ್ಷಿಸಿಕೊ. ಪತಿವ್ರತಾ ಸ್ತ್ರೀಯರು, ಪ್ರಾಣಪ್ರಿಯನ ಅಭಿಪ್ರಾಯವನ್ನು ಅನುಸರಿಸಿ ಅನುಭವಿಸುವ ದುಃಖವೂ, ಎಲ್ಲ ಲೋಕಗಳಲ್ಲಿಯೂ ಹೊಗಳಿಸಿಕೊಳ್ಳತಕ್ಕದ್ದಾಗಿದೆ. ಅದು ಯಾರಿಂದಲೂ ಯಾವಾಗಲೂ ನಿಂದಿತವಾಗತಕ್ಕದ್ದಲ್ಲ."

ಕೊನೆಯಲ್ಲಿ ರಾಮನು ಸೀತೆಗೆ ಹೀಗೆ ಹೇಳಿಕಳುಹಿಸುತ್ತಾನೆ "ಎಲೌ ಮನೋಹರಾಂಗಿಯೆ! ವಿಧಿವಶದಿಂದ ನೀನು ದೂರದಲ್ಲಿದ್ದರೂ, ನಾನು ನಿನ್ನ ಸಾನ್ನಿಧ್ಯದಿಂದ ಮೊದಲು ಅನುಭವಿಸುತ್ತಿದ್ದಂತೆಯೇ, ನಿನ್ನ ಸ್ಪರ್ಶವನ್ನು ನಿನ್ನ ಅಂಗಗಳ ಮೇಲೆ, ಬೀಸಿಕೊಂಡು ಬರುವ ಮಲಯಮಾರುತದಿಂದಲೂ, ನೀನು ನೋಡಿದ ಚಂದ್ರನ ದರ್ಶನ ಮಾಡುವುದರಿಂದ ನಿನ್ನ ಮುಖ ಚಂದ್ರದ ಆಹ್ಲಾದವನ್ನೂ ಒಂದೇ ಭೂಮಿಯಲ್ಲಿ ವಾಸಿಸುತ್ತಿರುವುದರಿಂದ ನಿನ್ನ ಶರೀರೈಕ್ಯವನ್ನೂ, ನಕ್ಷತ್ರಗಳ ಗುಂಪಿನ ಚಿತ್ರ ವಿಚಿತ್ರಗಳಾದ ಮೇಲುಕಟ್ಟು ಉಳ್ಳ ಅಂತರಿಕ್ಷವನ್ನೇ ಶಯನದ ಸುಂದರ ಮೇಲುಕಟ್ಟೆಂದೂ ಭಾವಿಸಿ, ನಿನ್ನನ್ನೇ ಹೊಂದಿದಂತೆ ಸುಖಿಸುತ್ತಿದ್ದೇನೆ."

ಹೀಗೆ ಹಂಸಸಂದೇಶ, ಆಚಾರ್ಯರ ಉತ್ಕೃಷ್ಟ ಕಾವ್ಯ; ಬಹುರಮಣೀಯಗಳಾದ ವರ್ಣನೆಗಳು, ಅಪಾರವಾದ ಶಬ್ದಸಂಪತ್ತು, ಪದಲಾಲಿತ್ಯ, ವಿವಿಧ ಪ್ರಕಾರದ ಅಲಂಕಾರಗಳು, ಎಲ್ಲೆಡೆಯೂ ಧರ್ಮಪಟುತ್ವ ಈ ಗುಣಗಳಿಂದ ಈ ಕಾವ್ಯ ರಸಿಕರ ಮನಸ್ಸನ್ನು ಆಕರ್ಷಿಸುತ್ತದೆ. ಈ ಕಾವ್ಯದ ಸ್ವಾರಸ್ಯವನ್ನು ಮೂಲವನ್ನು ಓದಿಯೇ ಅನುಭವಿಸಬೇಕು. ಮೂಲದ ಮಾಧುರ್ಯ ವೀಣೆಯ ತಂತಿಯ ಸುಂದರ ನಿಸ್ವನದಂತೆ; ಅದು ಕವಿವಾಣಿ, ಅದನ್ನು ಅನುವಾದದಲ್ಲಿ ತರಲು ಸಾಧ್ಯವೇ ಇಲ್ಲ. ಆ ಶಬ್ದ ಮಾಧುರ್ಯ, ಕಾವ್ಯಗಾನ, ಪದಬಂಧ ಕರ್ಣಾಮೃತಲಾಲಿತ್ಯ ಇವುಗಳ ಮೇಳವಿಲ್ಲದೆ ಬರಿಯ ಶುಷ್ಕ ಅರ್ಥದಿಂದ ಕಾವ್ಯಾನಂದ ಸಾಧ್ಯವಾದೀತೆ ?

ತಮ್ಮ ಎಲ್ಲ ಕೃತಿಗಳಲ್ಲಿರುವಂತೆ ವೇದಾಂತದೇಶಿಕರು, ಹಂಸಸಂದೇಶದಲ್ಲಿ ಸಹ ಧಾರ್ಮಿಕ ಅಂತರಾರ್ಥವನ್ನು ಹುದುಗಿಸಿದ್ದಾರೆ "ದುಷ್ಟರಶಿಕ್ಷಣ ಶಿಷ್ಟರ

ರಕ್ಷಣೆಗಾಗಿಯೇ ಶ್ರೀರಾಮನು ಸೀತೆಯನ್ನು ಕಳೆದು ಕೊಂಡಿದ್ದಾನೆ. ತಾನು ಬೇಗ ಬಂದು ಅವಳ ಬಂಧನವನ್ನು ಬಿಡಿಸುವುದಾಗಿ ಹಂಸದೊಂದಿಗೆ ಸಂದೇಶವನ್ನು ಕಳುಹಿಸಿದ್ದಾನೆ. ರಾವಣನ ಸೆರೆಯಲ್ಲಿರುವ ಸೀತೆ, ಸಂಸಾರವೆಂಬ ರಾಕ್ಷಸನ ಕೈಲಿ ಬಂಧನದಲ್ಲಿರುವ ಜೀವ. ಪರಮಾತ್ಮನಾದ ರಾಮನು, ಶುದ್ಧಸ್ವರೂಪ ಹಂಸದೊಡನೆ, ಸಂದೇಶ ಕಳುಹಿಸುವುದು, ಅವನ ಆರ್ತತ್ರಾಣ ಪರಾಯಣತೆಯನ್ನು ಸೂಚಿಸುವ ಕಾತುರತೆಯಾಗಿದೆ."

ನಾಚ್ಛಾದಯತಿ ಕೌಪೀನಂ
ನದಂಶಮಶಕಾಪಹಂ
ಶುನಃಪುಚ್ಛಮಿವಾನರ್ಥಂ
ಪಾಂಡಿತ್ಯಂ ಧರ್ಮವರ್ಜಿತಂ

ಧರ್ಮವರ್ಜಿತವಾದ ಪಾಂಡಿತ್ಯ ಶುನಃಪುಚ್ಛಯಂತೆ ಅನರ್ಥ. ಏಕೆಂದರೆ ಅದರಿಂದ ಶ್ವಾನದ ಮಾನರಕ್ಷಣೆಯೂ ಆಗುವುದಿಲ್ಲ. ಅದು ತನ್ನನ್ನು ಕಡಿಯುವ ಸೊಳ್ಳೆ, ನೊಣಗಳನ್ನು ಪುಚ್ಛದಿಂದ ಓಡಿಸಿಕೊಳ್ಳಲು ಸಾಧ್ಯವಿಲ್ಲ.

ಶ್ರೀ ವೇದಾಂತದೇಶಿಕರು, ತಮ್ಮ ಆಯಸ್ಸನ್ನೆಲ್ಲ, ಲೋಕವನ್ನು ಸನ್ಮಾರ್ಗದಲ್ಲಿ ನಡೆಸುವುದಕ್ಕಾಗಿಯೇ ಕಳೆದರು. ಜನತೆಯನ್ನು ಭಕ್ತಿಯ ಮಾರ್ಗದಲ್ಲಿ ಒಯ್ದು, ಅವರು ಪರಮಾತ್ಮನನ್ನು ನಂಬಿ, ಅವನಲ್ಲಿ ಪೂರ್ಣಶರಣಾಗತರಾಗಿ, ಸುಗುಣಗಳನ್ನೇ ವೃದ್ಧಿಮಾಡಿಕೊಂಡು, ಸ್ವಾರ್ಥವನ್ನು ತೊರೆದು ಲೋಕೋಪಕಾರಕ್ಕಾಗಿ ಬಾಳಬೇಕೆಂಬುದೇ ಅವರು ಅನುಷ್ಠಾನದಿಂದ ಜಗತ್ತಿಗೆ ತೋರಿದ ಆದರ್ಶವಾಗಿದೆ. ಇಂತಹ ಮಹಾತ್ಮರು ಲೋಕಕಲ್ಯಾಣಕ್ಕಾಗಿಯೇ ಬಾಳುತ್ತಾರೆ. ಗೃಹಸ್ಥರಾಗಿದ್ದೂ ಮಕ್ಕಳು ಮನೆ ನಡೆಸಿಯೂ,

ಆತಸ್ಕರಗ್ರಾಹ್ಯ ಪವಿತ್ರಪಾತ್ರೇ
ಅನಿಂದ್ರಿಯೋನ್ಮಾದ ಕರ್ರ್ಹವಿರ್ಭಿಃ

ಆಹ್ನಿಕಾದಿಗಳಿಗೆ ಉಪಯೋಗಿಸುವ ಪಾತ್ರೆ ಪರಿಕರಗಳು ಕಳ್ಳನಿಗೆ ಸಹ ಬೇಡ "ಬೇಡ"ವೆನ್ನುವಂಥದಾಗಿರಬೇಕು. ಭಗವಂತನಿಗೆ ನೈವೇದ್ಯ ಮಾಡುವ ವಸ್ತು, ತುಂಬ ಸಾತ್ವಿಕವೂ, ತಾಮಸ ರಾಜಸ ಮಾದಕ ಗಂಧವರ್ಜ್ಯವೂ ಆಗಿರಬೇಕೆಂಬ ತತ್ವವನ್ನನುಸರಿಸಿ ಅವರು ಬಾಳಿದರು. ಅವರು ಧರ್ಮದಲ್ಲಿ ದಯಕ್ಕೆ ಅತ್ಯಂತ ಪ್ರಾಧಾನ್ಯವನ್ನು ಕೊಟ್ಟರು. ಅವರು ರಚಿಸಿದ ಪ್ರಾರಂಭದ ಕವನಗಳಲ್ಲಿ "ದಯಾಶತಕವೂ" ಒಂದು. ದಯಾಶತಕ, ಭಗವಂತನಿಗೂ (ದುಷ್ಟನಿಗ್ರಹ ಶಿಷ್ಟಪರಿಪಾಲನೆ ಇದ್ದರೂ) ದಯೆಯೇ ಮುಖ್ಯ ಧರ್ಮವೆಂಬುದನ್ನು ಹೇಳುತ್ತದೆ. "ಎಲೈ ದಯೆಯೇ ಎಲ್ಲ ಗುಣಗಳೂ ಸೇರಿ ತಮ್ಮ ತಮ್ಮ ಕಾನೂನು ಕಟ್ಟಳೆಗೆ ತಕ್ಕಂತೆ ಶಿಕ್ಷೆ ವಿಧಿಸುವ ವಿಷಯದಲ್ಲಿ ವಾದ ವಿವಾದ ಮಾಡಿದಾಗ, ಭಗವಂತನ ಎಲ್ಲ ಗುಣಗಳ ಪೈಕಿ ನೀನೊಬ್ಬಳೇ ಬೇರೆಯಾಗಿ ನಿಂತು, ತಪ್ಪಿತಸ್ಥನ ತಪ್ಪುಗಳಿಗೆಲ್ಲ ಒಂದು ಕಾರಣವನ್ನು ಕಂಡುಹಿಡಿದು ಅವನಿಗೆ ಕ್ಷಮೆಯನ್ನು ಒದಗಿಸುತ್ತೀರು" ಎಂದು ಆಚಾರ್ಯರು ದಯೆಯ ಸ್ವರೂಪವನ್ನು ವಿವರಿಸುತ್ತಾರೆ.

ಇಂತಹ ಮಹಾತ್ಮರು ಅನೇಕ ಶತಮಾನಗಳಿಗೊಮ್ಮೆ ಮಹಾತ್ಮ ಗಾಂಧೀಜಿಯವರಂತೆ (ಗಾಂಧೀ ಜನ್ಮೋತ್ಸವದಂದೇ ವೇದಾಂತ ದೇಶಿಕರ ತಿರುನಕ್ಷತ್ರವೂ ಬರುತ್ತೆ) ನಮ್ಮ ಪುಣ್ಯದಿಂದ ಮಾನವ ಜನಾಂಗದಲ್ಲಿ ಜನ್ಮವೆತ್ತುತ್ತಾರೆ. ಅವರು ಅಖಿಲ ಮಾನವ ಕುಲದ ಉದ್ಧಾರಕರು. ಅವರು ಮಾನವ ನಿರ್ಮಿತ ಯಾವುದೇ ಜಾತಿ ಪಂಥ ದೇಶಗಳಲ್ಲಿ ಜನಿಸಿದ್ದರೂ ಅವರ ಸಂದೇಶ ಸೇವೆ, ಪೂರ್ಣ ಜಗತ್ತಿಗ್ಗೆ ಎಲ್ಲ ಸಂತರೂ ಹಾಗೆಯೇ. ನಾನಾಮತ ಸಾಮರಸ್ಯ ಮಾನವ ಕುಲದ ಒಟ್ಟು ಶ್ರೇಯಸ್ಸು, ಮಾನವ ಧರ್ಮ ಇವೇ ಅವರ ಬಾಳಗುರಿ. ಅಂಥವರು ಯಾವ ಪಂಗಡ ಪಂಥದಲ್ಲಿ ಜನಿಸಿದ್ದರೂ ಅವರ ಅನುಯಾಯಿಗಳು ತಮ್ಮ ಆ ವಿಶ್ವಪ್ರೇಮಿ ಗುರುವನ್ನು ನೆನೆದು ಅವನ ಧ್ಯೇಯಕ್ಕನುಗುಣವಾಗಿ ಸರ್ವರಲ್ಲಿಯೂ ವಿನಯ, ಪ್ರೀತಿ, ಕರುಣೆ, ಔದಾರ್ಯ, ಸೇವಾಬುದ್ಧಿಯಿಂದ ಬಾಳುವುದೇ ಅವರು ತಮ್ಮ ಗುರುವಿಗೆ ಸಲ್ಲಿಸುವ ಕಾಣಿಕೆಯಾಗುತ್ತದೆ. ಭಗವತ್ ಭಕ್ತಿಯಿಂದ ಲೋಕ ಕಲ್ಯಾಣವನ್ನು ಸಾಧಿಸುವುದರಲ್ಲಿ ವೇದಾಂತ ದೇಶಿಕರು ಅಖಿಲ ಮಾನವ ಜಗತ್ತಿನ ದಾಸರೇ ಆಗಿದ್ದರು. "ವಯಂತು ಹರಿದಾಸಾನಾಂ ಪಾದರಕ್ಷಾವಲಂಬಕಾಃ (ನಾವು ಹರಿಭಕ್ತರ ಪಾದರಕ್ಷೆಗಳನ್ನು ಆಶ್ರಯಿಸಿರುವವರು).

ಕವಿತಾರ್ಕಿಕ ಸಿಂಹರೂ, ಸರ್ವತಂತ್ರ ಸ್ವತಂತ್ರರೂ, ವಾದದಲ್ಲಿ ಪ್ರತಿವಾದಿ ಭಯಂಕರರೂ, ಸ್ವಭಾವದಿಂದ ಕರುಣಾಪೂರ್ಣರೂ ಆಗಿದ್ದ ವೇದಾಂತದೇಶಿಕರು ಪೂರ್ಣ ಭಗವದ್ಭಕ್ತರಾದುದರಿಂದ ಪೂರ್ಣ ವಿನೀತರು. ಜ್ಞಾನಿಗೂ ಸಾಧಕನಿಗೂ ಸತ್ಯಾನುಸಂಧಾನದಷ್ಟೇ ವಿನಯಾಚರಣೆಯೂ ಆವಶ್ಯಕವಾದುದೆಂದು ಗಾಂಧೀಜಿ ಹೇಳಿದ್ದಾರೆ. ಶ್ರೀ ವೇದಾಂತ ದೇಶಿಕರ ವಿಷಯದಲ್ಲಿ ಒಂದು ಕಥೆ ಪ್ರಚಾರದಲ್ಲಿದೆ. ಮಹಾಮುನಿಗಳಾದ ಯಾಮುನಾಚಾರ್ಯರು ರಚಿಸಿದ ಸ್ತೋತ್ರರತ್ನವೆಂಬ ಭಕ್ತಿಗೀತೆಯಲ್ಲಿರುವ "ಅಮರ್ಯಾದಃ ಕ್ಷುದ್ರಃ"--

ಅಳತೆಗೆಟ್ಟವ ನಲ್ಪನುಂ ಚಂ
ಚಲಮತಿ, ಕರುಬುವಿಕೆ ಹುಟ್ಟಿದ
ನೆಲೆವನೆಯೆ ಕೃತಘಾತಿ
ದುರಹಂಕಾರಿ ಕಾಮುಕನು
ಖಳನು ಕ್ರೂರನು ಪಾಪಿ ನಾನೀ
ಯಳಲಕಡಲಿನ ವಾರದಿಂ ಕಳೆ
ದುಳಿದು ನಿನ್ನಯ ಚರಣಸೇವೆಯನೆಂತು
ಮಾಡುವೆನೊ
(ಹೆಮ್ಮಿಗೆ ದೇಶಿಕಾಚಾರ್ಯರ ಅನುವಾದ)

ಎಂಬ ಶ್ಲೋಕವನ್ನು ಹೇಳಿಕೊಂಡು ವೇದಾಂತ ದೇಶಿಕರು ಶ್ರೀರಂಗನಾಥನಿಗೆ ನಮಿಸುತ್ತಿದ್ದರಂತೆ. ಅದನ್ನು ನೋಡಿ, ಅವರನ್ನು ಯಾವಾಗಲೂ ದ್ವೇಷಿಸುತ್ತಲೇ ಇದ್ದ ಕೆಲವರು "ನೋಡಿ; ನೋಡಿ ನಾವು ಹೇಳುವುದು ಸುಳ್ಳೆ? ತನ್ನ ಯೋಗ್ಯತೆಯನ್ನು -- ತಾನು ಪಾಪಿಷ್ಠನೆಂದು ಅವನೆ ಹೇಳಿಕೊಳ್ಳುತ್ತಿದ್ದಾನೆ" ಎಂದರಂತೆ. ವೇದಾಂತ ದೇಶಿಕರು ಸ್ವಲ್ಪವೂ ಕೋಪಿಸಿಕೊಳ್ಳದೆ ದೇವರೆದುರಿಗೆ ನಿಂತು "ಪ್ರಭೋ ನಾನು ಹೇಳುವ ಮಾತಿಗೆ ಸಾಕ್ಷಿಗಳನ್ನೂ ಜೊತೆಯಲ್ಲಿಯೇ ಕರೆದುಕೊಂಡು ಬಂದಿದ್ದೇನೆ. ಇನ್ನು ನನ್ನಲ್ಲಿ ಕೃಪೆಮಾಡದೆ ನಿನಗೆ ವಿಧಿಯೇ ಇಲ್ಲ" ಎಂದು ಹೇಳಿಕೊಂಡರಂತೆ. ಇಂತಹ ವಿನಯ ಸಂಪನ್ನರೂ ವೈರಾಗ್ಯ ಚಕ್ರವರ್ತಿಗಳೂ ತಪಸ್ವಿಗಳೂ ಲೋಕ ಕಲ್ಯಾಣಕ್ಕಾಗಿಯೇ ತಮ್ಮ ಆಯುಸ್ಸನ್ನು ವಿನಿಯೋಗಿಸಿದವರೂ ಆದ ಶ್ರೀ ವೇದಾಂತಾಚಾರ್ಯರ ಅಮರ ಸಂದೇಶವನ್ನು ನಾವು ಸದಾ ನೆನೆದು ಅದರಂತೆ ಆಚರಿಸಲು ಅವರ ಆಶೀರ್ವಾದ ಕೃಪೆ ನಮಗೆ ರಕ್ಷೆಯಾಗಲಿ.

ಶ್ರೀ ವೇದಾಂತಗುರವೇ ನಮಃ



## ವೈಭವದ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವ

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ಬ್ರಹ್ಮೋತ್ಸವವು 3-6-95 ರಿಂದ 12-6-95 ರ ವರೆಗೆ ವೈಭವದಿಂದ ನಡೆದು ಸಂಪನ್ನವಾಯಿತು. ತದಂಗವಾಗಿ ದಿನವೂ ಬೆಳಗ್ಗೆ ಸಂಜೆಗಳಲ್ಲಿ ವಿವಿಧ ವಾಹನ ಸೇವೆಗಳು ನಡೆದವು. 8-6-95 ರಂದು ರಾತ್ರಿ ಗರುಡವಾಹನದಲ್ಲಿ ಸ್ವಾಮಿಯನ್ನು ಊರ ಮೆರವಣಿಗೆಯಲ್ಲಿ ಬಿಜಮಾಡಿಸಿದಾಗ ಅಸಂಖ್ಯ ಭಕ್ತರು ರಥಬೀದಿಗಳಲ್ಲಿ ಸ್ವಾಮಿಯನ್ನು ಭಕ್ತಿ ಪ್ರಪತ್ತಿಗಳಿಂದ ಸ್ವಾಗತಿಸಿದರು.

11 ರಂದು ಗೋವಿಂದರಾಜಸ್ವಾಮಿ ರಥೋತ್ಸವ ಬೆಳಗ್ಗೆ ಗೋವಿಂದ ನಾಮಘೋಷ, ವೇದಪಾರಾಯಣ, ಪ್ರಬಂಧಪಠಣಗಳ ಮಧ್ಯೆ ಮಂಗಳ ವಾದ್ಯ ಸಹಿತವಾಗಿ ಹೊರಬಂದಾಗ ಸಾವಿರಾರು ಮಂದಿ ಭಕ್ತರು ರಥವನ್ನು ಎಳೆದು ಸ್ವಾಮಿಯನ್ನು ಸ್ವಾಗತಿಸಿದರು. ಅಂದು ಸಂಜೆ ಅಶ್ವವಾಹನವೂ ಮಾರನೆಯ ದಿನ ಚಕ್ರಸ್ನಾನ, ಧ್ವಜಾವರೋಹಣಗಳೂ ನಡೆದವು.

## ವಿಶೇಷ ಪ್ರಾಧಿಕಾರದ ನಿರ್ಣಯಗಳು

ಮೇ 28 ರಂದು ಹೈದರಾಬಾದಿನಲ್ಲಿ ತಿ. ತಿ. ದೇವಸ್ಥಾನಗಳ ವಿಶೇಷ ಪ್ರಾಧಿಕಾರದ (ಸ್ಪೆಸಿಫೈಡ್ ಅಥಾರಿಟಿ) ಸಭೆನಡೆದು ಹಲವಾರು ನಿರ್ಣಯಗಳನ್ನು ಕೈಗೊಂಡಿತು. ಆ ವಿವರಗಳನ್ನು ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿಗಳು ತಿರುಪತಿಯಲ್ಲಿ ಪತ್ರಿಕಾ ಸಮಾವೇಶವೊಂದರಲ್ಲಿ ಬಹಿರ್ಗತಗೊಳಿಸಿದರು. ಅದರಂತೆ ಹಲವು ಮುಖ್ಯ ನಿರ್ಣಯಗಳು ಈ ರೀತಿಯಿವೆ--

ತಿರುಪತಿ - ಬೆಂಗಳೂರು ರಸ್ತೆಯಲ್ಲಿ ತಿರುಪತಿಯ ಹೊರಭಾಗದ ಕೃಷ್ಣಾಪುರಂ ಠಾಣೆಯಿಂದ ಕೃಷಿ ವಿಶ್ವವಿದ್ಯಾಲಯದ ವರೆಗಿನ, ಈಗ ಲೋಕೋಪಯೋಗಿ ಇಲಾಖೆಗೆ ಸೇರಿದ ರಸ್ತೆಯನ್ನು ನಾಲ್ಕು ವಾಹನಗಳ ರಸ್ತೆಯಾಗಿ ಅಭಿವೃದ್ಧಿಗೊಳಿಸಲು ತೀರ್ಮಾನಿಸಲಾಗಿದೆ.

ಮೈಸೂರಿನ ಶ್ರೀ ಗಣಪತಿ ಸಚ್ಚಿದಾನಂದ ಪೀಠಕ್ಕೆ ಕಳೆದ ವರ್ಷದಂತೆಯೇ ಈ ವರ್ಷವೂ ಒಂದು ಲಕ್ಷ ರೂಪಾಯಿಗಳ ವಿರಾಳವನ್ನು ನೀಡಲು ತೀರ್ಮಾನಿಸಲಾಯಿತು.

# ವಾರ್ತಾಲಹರಿ

ತಿರುಪತಿಯಲ್ಲಿನ ಪ್ರಸೂತಿ ಆಸ್ಪತ್ರೆಯಲ್ಲಿ ಸದ್ಯಕ್ಕೆ ಇರುವ ಶಾಲಾ ಆರೋಗ್ಯ ಕೇಂದ್ರ (ದಂತಚಿಕಿತ್ಸೆ)ಕ್ಕೆ ಒಂದು ಲಕ್ಷ ರೂಪಾಯಿ ಅಥವಾ ಸೂಕ್ತ ಭವನವನ್ನು ನೀಡಬೇಕೆಂದು ತೀರ್ಮಾನಿಸಲಾಗಿದೆ.

ಮಾರಿಷಸ್‌ನ ಬಾಲಾಜೀ ವೆಂಕಟೇಶ್ವರ ಟೆಂಪಲ್ ಟ್ರಸ್ಟ್‌ಗೆ 89 ಸಾವಿರ ರೂಪಾಯಿಗಳ ಬೆಲೆಯ ವಿಗ್ರಹಗಳನ್ನು ಉಚಿತವಾಗಿ ನೀಡಲು ತೀರ್ಮಾನಿಸಲಾಗಿದೆ.

ತಿರುಮಲೆಯ ಪಾವಿತ್ರ್ಯವನ್ನು ಕಾಪಾಡಲು ಈಗಿರುವ ಮದ್ಯ, ಮಾಂಸ, ಮಾದಕ ಪೇಯ - ಮಾರಾಟ ನಿಷೇಧ ಕಾನೂನು ಪಟ್ಟಿಯಲ್ಲಿ ಆರ್ಜಿತಸೇವೆಗಳ, ಪ್ರಸಾದಗಳ, ವಸತಿಯ ಟಿಕೆಟ್‌ಗಳ, ಬ್ಲಾಕ್ ಮಾರ್ಕೆಟಿಂಗ್ ಅನ್ನೂ ಸೇರಿಸಲು ಆಂಧ್ರಪ್ರದೇಶ ಸರ್ಕಾರವನ್ನು ಕೇಳಲು ತೀರ್ಮಾನಿಸಲಾಗಿದೆ.

ಬಾಕರಾಪೇಟೆಯಲ್ಲಿ 18 ಲಕ್ಷ ರೂಪಾಯಿ ಅಂದಾಜು ವೆಚ್ಚದಲ್ಲಿ ನಿರ್ಮಿಸಲು ಈಗಾಗಲೇ ಅನುಮತಿ ಪಡೆದ ಕಲ್ಯಾಣಮಂಟಪ ನಿರ್ಮಾಣ ಕಾರ್ಯವನ್ನು ಕೈಗೆತ್ತಿಕೊಳ್ಳಲು ತೀರ್ಮಾನಿಸಲಾಯಿತು.

ನಾರಾಯಣಾದ್ರಿಯಲ್ಲಿನ ಉದ್ಯಾನವನದಲ್ಲಿ ಅನ್ನಮಾಚಾರ್ಯರ ಹೆಸರಿನಲ್ಲಿ ಒಂದು ನೆರಳು ಬಯಲಿನ ರಂಗಮಂಟಪವನ್ನು ನಿರ್ಮಿಸಿ, ಬರುವ ವರ್ಷದಿಂದ ಅನ್ನಮಾಚಾರ್ಯ ಉತ್ಸವಗಳನ್ನು ನಡೆಸಲು ತೀರ್ಮಾನಿಸಲಾಯಿತು.

ತಿ.ತಿ.ದೇ.ಗಳ ಕಾಲೇಜುಗಳಲ್ಲಿನ ಕಲಾ ವಿಜ್ಞಾನ ವಿಭಾಗಗಳನ್ನು ಬೇರೆ ಬೇರೆ ಭವನಗಳಲ್ಲಿ, ನಡೆಸಲು ತೀರ್ಮಾನಿಸಿ, ಮೊದಲಹಂತದಲ್ಲಿ ಪದವಿ ಪೂರ್ವ ವಿಭಾಗಗಳನ್ನು ಪ್ರತ್ಯೇಕಿಸಬೇಕೆಂದು ತೀರ್ಮಾನಿಸಲಾಗಿದೆ.

ತಿರುಪತಿಯಲ್ಲಿ ಶ್ರೀ ರಾಮಕೃಷ್ಣಮಠಕ್ಕೆ ಅರೆ ಎಕರೆ ಸ್ಥಳವನ್ನು ಉಚಿತವಾಗಿ ನೀಡಲು ತೀರ್ಮಾನಿಸಲಾಗಿದೆ.

ಹೊಸದೆಹಲಿಯಲ್ಲಿ ನೂತನವಾಗಿ ನಿರ್ಮಿಸಲು ತೀರ್ಮಾನಿಸಿದ ಸಮಾಚಾರಕೇಂದ್ರದ 1.17 ಎಕರೆ ಸ್ಥಳದ ಬೆಲೆಯನ್ನು ತಮ್ಮ ಬೇಡಿಕೆಗೆ ಅನುಗುಣವಾಗಿ 84 ಲಕ್ಷರೂಪಾಯಿಗಳಿಂದ 30 ಲಕ್ಷರೂಪಾಯಿಗಳಿಗೆ ಕೇಂದ್ರಸರ್ಕಾರ ತಗ್ಗಿಸಿದೆಯೆಂದು ಶ್ರೀ ಎನ್. ರಮೇಶ್‌ಕುಮಾರ್ ತಿಳಿಸಿದ್ದಾರೆ.



ತಿರುನಿಲಯ ಆರಂಭೋತ್ಸವದಲ್ಲಿ ಆಂಧ್ರಪ್ರದೇಶದ ಮುಖ್ಯಮಂತ್ರಿ
ಶ್ರೀ ಎನ್. ಟಿ. ರಾಮರಾವ್ ಅವರೊಡನೆ ಸ್ವಾಮಿ ರಂಗನಾಥಾನಂದಜೀ ಅವರು.

## ಬೇಸಿಗೆಯಲ್ಲಿ ಹೆಚ್ಚಿದ ಯಾತ್ರಿಕ ಸಂದಣಿ

1995 ರ ಬೇಸಿಗೆಯಲ್ಲಿ ತಿರುಮಲೆಗೆ ಶ್ರೀ ವೆಂಕಟೇಶ್ವರಸ್ವಾಮಿ ದರ್ಶನಕ್ಕೆ ಆಗಮಿಸಿದ ಯಾತ್ರಿಕರ ಸಂಖ್ಯೆ ಹೆಚ್ಚಿ ದಾಖಲೆಯನ್ನು ಸ್ಥಾಪಿಸಿತು ಎಂದು ಹೇಳಬಹುದು. ಸಾಧಾರಣವಾಗಿ ಪ್ರತಿದಿನ ಬೆಳಗ್ಗೆ 6-30 ರಿಂದ ರಾತ್ರಿ 2-30 ವರೆಗೆ 1 9 ಗಂಟೆಗಳ ಕಾಲ ದರ್ಶನಾವಕಾಶವಿದ್ದು, ಬುಧವಾರ - ಸಹಸ್ರಕಲಶಾಭಿಷೇಕ, ಗುರುವಾರ - ತಿರುಪ್ಪಾವಡಾ, ಶುಕ್ರವಾರ - ಅಭಿಷೇಕಗಳಿಂದಾಗಿ ದರ್ಶನ ಸಮಯ 90 ನಿಮಿಷದಿಂದ 100 ನಿಮಿಷ ತಗ್ಗುವುದು. ಆದರೂ ಹೆಚ್ಚುಮಂದಿ ಭಕ್ತರು ಸ್ವಾಮಿಯನ್ನು ದರ್ಶಿಸಲು ಅನುಕಕೂಲ ಮಾಡಲು ತಿ.ತಿ.ದೇ. ಸಿಬ್ಬಂದಿ ಶ್ರಮಿಸಿದರು. ದರ್ಶನದ ವಿವರಪಟ್ಟಿಯನ್ನು ಇಲ್ಲಿ ನೀಡಲಾಗಿದೆ.

| ದಿನಾಂಕ | ಒಟ್ಟುಯಾತ್ರಿಕ ಸಂಖ್ಯೆ | ವಿಶೇಷ ಪ್ರವೇಶ ರೂ. 30/- | ಹುಂಡಿ ಆದಾಯ ರೂ.ಗಳಲ್ಲಿ |
|---|---|---|---|
| 26-5-95 | 75,109 | 18,725 | 24,65,790 |
| 27-5-95 | 82,288 | 21,585 | 26,79,660 |
| 28-5-95 | 81,365 | 25,036 | 27,39,079 |
| 29-5-95 | 82,200 | 16,973 | 31,04,740 |
| 1-6-95 | 66,492 | 13,082 | 21,03,540 |
| 2-6-95 | 66,960 | 13,965 | 40,80,975 |
| 3-6-95 | 71,442 | 20,913 | 22,12,196 |
| 4-6-95 | 81,347 | 22,767 | 24,81,508 |
| 5-6-95 | 84,000 | 16,932 | 26,69,683 |

ಜೂನ್ 2 ರಂದು ಅಜ್ಞಾತ ಭಕ್ತರೊಬ್ಬರು 20 ಲಕ್ಷ ರೂಪಾಯಿಗಳನ್ನು ಕಾಣಿಕೆಯಾಗಿ ಸಲ್ಲಿಸಿದ್ದು ಅಂದಿನ ಆದಾಯದ ಪ್ರಮಾಣ ಹೆಚ್ಚಾಗಲು ಕಾರಣವಾಗಿದೆ. ಅಂದು 500 ರೂಪಾಯಿ ನೋಟುಗಳ 40 ಕಟ್ಟುಗಳು ಹುಂಡಿಯಲ್ಲಿ ದೊರೆತಿದ್ದು ಅದು 20 ಲಕ್ಷವಾಯಿತು. ಇದರಿಂದಾಗಿ ಅಂದಿನ ಆದಾಯ ಒಟ್ಟಿಗೆ ನಲವತ್ತು ಲಕ್ಷ ರೂಪಾಯಿಗಳನ್ನು ದಾಟಿದೆ.

## ಹೈದರಾಬಾದಿನಲ್ಲಿ ತಿ. ತಿ. ದೇ. ಕಲ್ಯಾಣಮಂಟಪ ಉದ್ಘಾಟನೆ

ಆಂಧ್ರಪ್ರದೇಶದ ಮುಖ್ಯಮಂತ್ರಿ ಶ್ರೀ ಎನ್.ಟಿ. ರಾಮರಾವ್ ಅವರು ಹೈದರಾಬಾದಿನಲ್ಲಿ ತಿ.ತಿ.ದೇ. ಕಲ್ಯಾಣಮಂಟಪ "ತಿರುನಿಲಯಂ" ಅನ್ನು ಈಚೆಗೆ ಉದ್ಘಾಟಿಸಿದರು.

ಮೂರುಕೋಟಿ ರೂಪಾಯಿಗಳ ವೆಚ್ಚದಲ್ಲಿ ನಿರ್ಮಿತವಾಗಿರುವ 'ತಿರುನಿಲಯಂ' ನಲ್ಲಿ ಎಲಿವೇಟಳ್ ಸೌಲಭ್ಯವೂ, ವಿಶಾಲವಾದ ಭೋಜನಶಾಲೆಯೂ, ಇದ್ದು ಹಲವು ಅಂತಸ್ತುಗಳಿಂದ ಕೂಡಿದೆ. ಇದರ ಒಂದು ಭಾಗವನ್ನು ತಿ.ತಿ.ದೇ. ವಿಚಾರಣಾ ಕೇಂದ್ರವಾಗಿಯೂ ಬಳಸಲಾಗುವುದು

ರಾಮಕೃಷ್ಣಾಶ್ರಮದ ಶ್ರೀ ಶ್ರೀ ಸ್ವಾಮಿರಂಗನಾಥಾನಂದ ಅವರು ಮುಖ್ಯ ಅತಿಥಿಯಾಗಿ ಪಾಲುಗೊಂಡು ತಿ. ತಿ. ದೇವಸ್ಥಾನಗಳು ನಡೆಸಿರುವ ಧಾರ್ಮಿಕ ಪ್ರಚಾರ ಕಾರ್ಯ, ಮಾನವೋಪಯೋಗಿ ಕಾರ್ಯಕ್ರಮಗಳನ್ನು ಶ್ಲಾಘಿಸುತ್ತ, ಯಾತ್ರಿಕಾನುಕೂಲತೆ ತಿರುಪತಿ - ತಿರುಮಲೆಗಳಲ್ಲಿ ಮತ್ತೂ ಹೆಚ್ಚಿ, ದೈವ ದರ್ಶನಕ್ಕೆ ಬರುವವರ ಬಾಧೆಗಳು ಕಡಮೆಯಾಗಲಿ ಎಂದು ಹಾರೈಸಿದರು.

ಶ್ರೀ ಎನ್.ಟಿ. ರಾಮರಾವ್ ಅವರ ಸಹಧರ್ಮಿಣಿ ಶ್ರೀಮತಿ ಲಕ್ಷ್ಮೀಪಾರ್ವತಿ ಹಾಗೂ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಷ್ ಕುಮಾರ್ ಅವರುಗಳು ಮಾತನಾಡಿದರು.

## ತಿರುಪತಿಯಲ್ಲಿ ಕೆರೆ ಸ್ವಾಧೀನ

ತಿರುಪತಿಯಲ್ಲಿನ ಶ್ರೀ ಕೋದಂಡರಾಮಸ್ವಾಮಿ ದೇವಾಲಯದ ಬಳಿ ಇರುವ ರಾಮಚಂದ್ರಗುಂಟದ 10.5 ಎಕರೆ ಸ್ಥಳ ತಿ. ತಿ. ದೇವಸ್ಥಾನಗಳ ಸ್ವಾಧೀನಕ್ಕೆ ಬಂದಿದೆ. ಇಲ್ಲಿ ಮೊದಲಿಗೆ ಒಂದು ಪುಷ್ಕರಿಣಿ ಇದ್ದು ಕಾಲಕ್ರಮೇಣ ಕೆಲಭಾಗ ಅನ್ಯಾಕ್ರಮಣಕ್ಕೆ ಗುರಿಯಾಗಿ ಇಡೀ ಕೆರೆಯೇ ವಿವಾದಗ್ರಸ್ತ ಪ್ರದೇಶವಾಗಿದ್ದಿತು. ಚಿತ್ತೂರು ಜಿಲ್ಲೆಯ ಕಲೆಕ್ಟರ್ ಹಾಗೂ ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಷ್‌ಕುಮಾರ್ ಅವರ ಆಸಕ್ತಿಯಿಂದಾಗಿ, ಅವರು ಸರ್ಕಾರಕ್ಕೆ ಕಳುಹಿಸಿದ ಬಿನ್ನವತ್ತಳೆಯಂತೆ ಈ ಸ್ಥಳವನ್ನು ತಿ. ತಿ. ದೇವಸ್ಥಾನಗಳಿಗೆ ನೀಡಲು ಆಂಧ್ರಪ್ರದೇಶ ಸರ್ಕಾರ ಒಪ್ಪಿದೆ. ಇದನ್ನು ಸುಂದರವಾದ ಪುಷ್ಕರಿಣಿಯನ್ನಾಗಿ ಪರಿವರ್ತಿಸಲು ತಿ.ತಿ.ದೇ. ಯೋಜಿಸಿದೆ.

# ಸ್ವಾಮಿ ಸೇವೆಯಲ್ಲಿ ರಾಷ್ಟ್ರಪತಿ

ಜೂನ್ 12 ರಂದು ಸೋಮವಾರ ಸಂಜೆ ಭಾರತದ ರಾಷ್ಟ್ರಪತಿ ಡಾ|| ಶಂಕರದಯಾಳಶರ್ಮ ತಮ್ಮ ಸತೀಮಣಿ ಶ್ರೀಮತಿ ವಿಮಲಾಶರ್ಮ ಅವರೊಡನೆ ತಿರುಮಲೆಗೆ ಆಗಮಿಸಿ ಸ್ವಾಮಿ ದರ್ಶನವನ್ನು ಪಡೆದರು. ಅವರೊಂದಿಗೆ ಆಂಧ್ರಪ್ರದೇಶದ ರಾಜ್ಯಪಾಲ ಶ್ರೀ ಕೃಷ್ಣಕಾಂತ್ ಹಾಗೂ ಅವರ ಸತೀಮಣಿ ಶ್ರೀಮತಿ ಸುಮನಾ ಕೃಷ್ಣಕಾಂತ್ ಅವರುಗಳಿದ್ದರು.

ವರಾಹಸ್ವಾಮಿ ದೇವಾಲಯವನ್ನು ಸಂದರ್ಶಿಸಿದ ನಂತರ ಸ್ವಾಮಿ ಆಲಯಕ್ಕೆ ಆಗಮಿಸಿದ ರಾಷ್ಟ್ರಪತಿ ದಂಪತಿಗಳನ್ನು ಆಲಯ ಮಹಾದ್ವಾರದಲ್ಲಿ ಘನವಾಗಿ ಸ್ವಾಗತಿಸಲಾಯಿತು. ಆಂಧ್ರಪ್ರದೇಶದ ಮುಜರಾಯಿ ಇಲಾಖಾಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ, ಮುಜರಾಯಿ ಇಲಾಖಾ ಕಮಿಷನರ್ ಶ್ರೀ ಸಿ.ಎಚ್. ಸತ್ಯನಾರಾಯಣ, ತಿ.ತಿ.ದೇ. ಕಾರ್ಯನಿರ್ವಹಣಾಧಿಕಾರಿ ಶ್ರೀ ಎನ್. ರಮೇಷ್‌ಕುಮಾರ್, ಜೆ.ಇ.ಓ. ಶ್ರೀ ಬಾಲಸುಬ್ರಹ್ಮಣ್ಯಂ, ಎಸ್.ಓ. ಶ್ರೀ ಕೃಷ್ಣಂರಾಜು, ಡಿ. ಎಸ್. ಓ. ಶ್ರೀ ಜನಾರ್ದನ ನಾಯುಡು ಆಲಯ ವಿಶೇಷದರ್ಜೆಯ ಡೆ. ಇ. ಓ. ಶ್ರೀ ವಾಸುದೇವ್, ತಿ.ತಿ.ದೇ. ಮಾಜಿ ಅಧ್ಯಕ್ಷ ಶ್ರೀ ಸುಬ್ಬುರಾಮಿರೆಡ್ಡಿ ಮೊದಲಾದವರು ಸ್ವಾಗತಿಸಿದರು.

ಸ್ವಾಮಿಯ ಆರಾಧನೆಯ ನಂತರ ರಾಷ್ಟ್ರಪತಿಗಳಿಗೆ ಶೇಷವಸ್ತ್ರ ಬಹುಮಾನಿಸಿ ಸನ್ಮಾನಿಸಲಾಯಿತು. ರಂಗನಾಯಕ ಮಂಟಪದಲ್ಲಿ ಅವರಿಗೆ ವೇದಾಶೀರ್ವಚನ ನೀಡಿದನಂತರ ಮುಜರಾಯಿ ಮಂತ್ರಿ ಶ್ರೀ ಸಿಂಹಾದ್ರಿ ಸತ್ಯನಾರಾಯಣ ಅವರು ಸ್ವಾಮಿಪ್ರಸಾದವನ್ನು ನೀಡಿದರು.

ವಿದೇಶೀ ಯಾತ್ರೆಯನ್ನು ಮುಗಿಸಿ ಭಾರತಕ್ಕೆ ಆಗತಾನೇ ಹಿಂದಿರುಗಿದ ರಾಷ್ಟ್ರಪತಿಗಳು ಮೂರು ದಿನ ತಿರುಮಲೆಯಲ್ಲಿದ್ದರು. ಸ್ವಾಮಿಗೆ ತಲೆಗೂದಲನ್ನು ಒಪ್ಪಿಸಿದ ಅವರು ಮಂಗಳವಾರ ಬೆಳಗ್ಗೆ ಸುಪ್ರಭಾತ, ತೋಮಾಲೆ, ಅರ್ಚನೆ ಸೇವೆಗಳಲ್ಲಿ ಪಾಲುಗೊಂಡು ಅಂದು ನಡೆದ ಸ್ವಾಮಿಯ ಜ್ಯೇಷ್ಠಾಭಿಷೇಕದಲ್ಲಿಯೂ ಪಾಲುಗೊಂಡರು.

ಅಂದು ಸಂಜೆ ತಿರುಚಾನೂರಿಗೆ ಆಗಮಿಸಿದ ರಾಷ್ಟ್ರಪತಿ, ರಾಜ್ಯಪಾಲ, ದಂಪತಿಗಳು ಶ್ರೀ ಪದ್ಮಾವತೀ ಅಮ್ಮನವರನ್ನು ಸಂದರ್ಶಿಸಿ ಆರಾಧಿಸಿದರು. ಅಲ್ಲಿನ ಕಮಲಸರೋವರದಲ್ಲಿ ನಡೆದ ಶ್ರೀ ಪದ್ಮಾವತೀ ಅಮ್ಮನವರ ತೆಪ್ಪೋತ್ಸವವನ್ನು ವೀಕ್ಷಿಸಿನಂತರ ತಿರುಮಲೆಗೆ ಹಿಂದಿರುಗಿದರು.



ಬುಧವಾರ ಬೆಳಗ್ಗೆ ಸ್ವಾಮಿಯ ಸುಪ್ರಭಾತ, ತೋಮಾಲೆ ಸೇವೆಗಳಲ್ಲಿ ಪಾಲುಗೊಂಡರು. ಈ ಸಂದರ್ಭದಲ್ಲಿ ಬೆಳಗ್ಗೆ 3-00 ರಿಂದ ಬೆಳಗ್ಗೆ 6-00 ರ ವರೆಗೆ ಅವರು ಆಲಯದಲ್ಲಿ ಇದ್ದರು.

ಮೂರು ದಿನ ತಿರುಮಲೆಯಲ್ಲಿದ್ದ ರಾಷ್ಟ್ರಪತಿಗಳು ಅಲ್ಲಿನ ಯಾತ್ರಿಕೋಪಯೋಗಿ ಕಾರ್ಯಗಳನ್ನು ಪರಿಶೀಲಿಸಿ ಸಂತೃಪ್ತಿಯನ್ನು ವ್ಯಕ್ತಪಡಿಸಿದರು. ಅವರು ಇಳಿದುಕೊಂಡಿದ್ದ ತಿರುಮಲೆಯ ಪದ್ಮಾವತೀ ಅತಿಥಿಗೃಹದ ಅಂಗಳದಲ್ಲಿ ತಮ್ಮ ಈ ಯಾತ್ರೆಯ ನೆನಪಿನಲ್ಲಿ ಒಂದು ಸಸಿಯನ್ನೂ ನೆಟ್ಟರು.





ನೂತನ ಸಹಕಾರ್ಯ ನಿರ್ವಹಣಾಧಿಕಾರಿ ಶ್ರೀ ಸತ್ಯನಾರಾಯಣರಾವು.



ವರ್ಗಾವಣೆಯಾದ ಶ್ರೀ ಶಿವಾಜಿ ಅವರಿಂದ ಪದವೀಭಾರ ಸ್ವೀಕರಣೆ,

ಹೊಸ ಪೌರ ಸಂಬಂಧಾಧಿಕಾರಿ ಶ್ರೀ ಸುಭಾಷ್ ಗೌಡ್.



## ನೂತನ ಸಹಕಾರ್ಯನಿರ್ವಹಣಾಧಿಕಾರಿ

ತಿ. ತಿ. ದೇವಸ್ಥಾನಗಳ ಸಹಕಾರ್ಯನಿರ್ವಹಣಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಸಿ. ಎಚ್. ಸತ್ಯನಾರಾಯಣ ಅವರನ್ನು ಆಂಧ್ರಪ್ರದೇಶ ಸರ್ಕಾರ ಅನಂತಪುರಂ ಜಿಲ್ಲೆಯ ಜಾಯಿಂಟ್ ಕಲೆಕ್ಟರ್ ಹುದ್ದೆಗೆ ವರ್ಗಮಾಡಿರುವುದರಿಂದ ತೆರವಾದ ಈ ಸ್ಥಳದಲ್ಲಿ ಭೂಕಂದಾಯ ಇಲಾಖೆಯ ಜಾಯಿಂಟ್ ಸೆಕ್ರೆಟರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಶ್ರೀ ಸತ್ಯನಾರಾಯಣ ರಾವು ಅವರನ್ನು ನಿಯಮಿಸಿದೆ.

ಶ್ರೀ ಸತ್ಯನಾರಾಯಣರಾವು ಅವರು 1984 ರ ಬ್ಯಾಚಿನ ಐ. ಎ. ಎಸ್. ಅಧಿಕಾರಿಗಳಾಗಿದ್ದು, ಜೂನ್ 3 ರಂದು ತಿ.ತಿ.ದೇ.ಗಳಲ್ಲಿ ಅಧಿಕಾರವನ್ನು ಸ್ವೀಕರಿಸಿದರು.

ಚಿತ್ತಶುದ್ಧಿಯಿಂದ ಯಾತ್ರಿಕರಿಗೆ ಸೌಕರ್ಯಗಳನ್ನು ಕಲ್ಪಿಸುವಲ್ಲಿ ತನ್ನ ಯಾವತ್ತೂ ಶಕ್ತಿಯನ್ನು ಬಳಸುವುದಾಗಿಯೂ, ಪವಿತ್ರಕ್ಷೇತ್ರವಾದ ತಿರುಪತಿಯ ಹಿರಿಮೆ ಗರಿಮೆಗಳಿಗೆ ತಕ್ಕಂತೆ ಸೇವೆ ಸಲ್ಲಿಸುವುದಾಗಿಯೂ ತಿಳಿಸಿದ್ದಾರೆ.

## ನೂತನ ಪೌರಸಂಬಂಧಾಧಿಕಾರಿ

ತಿ. ತಿ. ದೇವಸ್ಥಾನಗಳ ಪೌರಸಂಬಂಧಾಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ದೇವಾದಾಯ ಇಲಾಖೆಯ ಶ್ರೀ ಟಿ. ಶಿವಾಜಿಯವರನ್ನು ಆಂಧ್ರಪ್ರದೇಶ ಸರ್ಕಾರ ಶ್ರೀಕಾಳಹಸ್ತಿಯ ಶ್ರೀಕಾಳಹಸ್ತೀಶ್ವರ ಸ್ವಾಮಿ ದೇವಾಲಯದ ಕಾರ್ಯನಿರ್ವಹಣಾಧಿಕಾರಿಯಾಗಿ ವರ್ಗಾವಣೆಮಾಡಿದ್ದು ತೆರವಾದ ತಿ.ತಿ.ದೇ. ಪೌರಸಂಬಂಧಾಧಿಕಾರಿ ಸ್ಥಾನಕ್ಕೆ ಹೈದರಾಬಾದಿನಲ್ಲಿ ಆಂಧ್ರಪ್ರದೇಶ ಸಮಾಚಾರ ಶಾಖೆಯ ಡೆಪ್ಯೂಟಿ ಡೈರೆಕ್ಟರ್ ಶ್ರೀ ಸುಭಾಷ್‌ಗೌಡ ಅವರನ್ನು ನೇಮಕ ಮಾಡಿದೆ.

ಶ್ರೀ ಸುಭಾಷ್‌ಗೌಡ್ ಅವರು ಜೂನ್ 5 ರಂದು ತಮ್ಮ ಪದವಿಯನ್ನು ಸ್ವೀಕರಿಸಿದ್ದಾರೆ. ಎಲ್ಲರನ್ನೂ ಜೊತೆಗೂಡಿಸಿಕೊಂಡು ಸತ್ಸಂಬಂಧ ಹೊಂದುವುದರ ಮೂಲಕ ತಮ್ಮ ಕರ್ತವ್ಯ ನಿರ್ವಹಿಸುವುದಾಗಿ - ಪೌರಸಂಬಂಧ ಶಾಖೆಯವರು ಏರ್ಪಡಿಸಿದ್ದ ಬೀಳ್ಕೊಡುಗೆ - ಸ್ವಾಗತ ಸಮಾರಂಭದಲ್ಲಿ ಅವರು ನುಡಿದರು. ಶ್ರೀ ಚಂದ್ರಶೇಖರ ನಾಯುಡು ಅವರ ನೇತೃತ್ವದ ಸಭೆಯಲ್ಲಿ ಬೀಳ್ಕೊಡುಗೆ ಪಡೆದ ಶ್ರೀ ಶಿವಾಜಿ ಅವರು ತಮ್ಮ ವಿಧಿನಿರ್ವಹಣೆಯಲ್ಲಿ ಸಹಕರಿಸಿದ ಎಲ್ಲರಿಗೂ ಕೃತಜ್ಞತೆ ಸೂಚಿಸಿದರು.



# ದಾಸಸಾಹಿತ್ಯ ಪ್ರಾಜೆಕ್ಟ್ ಕಾರ್ಯಕ್ರಮಗಳು



## ಹೈದರಾಬಾದಿನಲ್ಲಿ ಬೇಸಿಗೆ ಶಿಕ್ಷಣ ಶಿಬಿರ

ಹೈದರಾಬಾದಿನ ಬಾಗಲಿಂಗಂ ಪಲ್ಲಿಯ ಶ್ರೀ ರಾಘವೇಂದ್ರ ಮಠದವರ ಸಹಕಾರದೊಡನೆ ದಾಸ ಸಾಹಿತ್ಯ ಪ್ರಾಜೆಕ್ಟ್ ಅಲ್ಲಿ ಬೇಸಿಗೆಯ ಹರಿದಾಸ ಸಾಹಿತ್ಯ ಶಿಕ್ಷಣ ಶಿಬಿರವನ್ನು ಏರ್ಪಡಿಸಿದ್ದಿತು. 21-5-95 ರಿಂದ 30-5-95 ರ ವರೆಗೆ ಹತ್ತು ದಿನ ಗಳ ಕಾಲ ನಡೆದ ಈ ಶಿಕ್ಷಣ ಶಿಬಿರದಲ್ಲಿ ಮುಖ್ಯ ಉಪನ್ಯಾಸಕರಾಗಿ ವ್ಯಾಸನಕೆರೆ ಶ್ರೀ ಪ್ರಭಂಜನಾ ಚಾರ್ಯ ದಿನವೂ ಬೆಳಗ್ಗೆ ಸಂಜೆಗಳಲ್ಲಿ ಹರಿಕಥಾ ಮೃತಸಾರದ ಸುಳಿವು ಸೂಕ್ಷ್ಮಗಳನ್ನು ವಿವರಿಸಿದರು. ಶ್ರೀ ಕೆ. ಅಪ್ಪಣ್ಣಾಚಾರ್ಯರು ಹರಿದಾಸ ತತ್ವವನ್ನು ಕುರಿತು ಬೋಧಿಸಿದರು. ಶ್ರೀ ಅನಂತಾಚಾರ್ಯ ಕಟಗೇರಿ ಅವರು ಹರಿದಾಸರ ಇಪ್ಪತ್ತು ಕೃತಿಗಳ ಸಂಗೀತ ಪಾಠ ನಡೆಸಿಕೊಟ್ಟರು.

ಬೇಸಿಗೆಯ ಶಿಕ್ಷಣ ಶಿಬಿರಕ್ಕೆ ಶುಭಕೋರಿ ಮೊದಲ ಎರಡು ದಿನಗಳಲ್ಲಿ ಪ್ರಧಾನಮಂತ್ರಿಗಳ ಸಮಾಚಾರ ಸಲಹಾದಾರರಾದ ಶ್ರೀ ಪಿ.ವಿ.ಆರ್.ಕೆ. ಪ್ರಸಾದರು ಉಪಸ್ಥಿತರಿದ್ದರು. ಸುಮಾರು 250 ಮಂದಿ ಶಿಬಿರಾರ್ಥಿಗಳು ಶಿಕ್ಷಣ ಪಡೆದ ಶಿಬಿರದ ಕೊನೆಯಲ್ಲಿ ಅಧ್ಯಯನ ಅಧ್ಯಾಪನಗಳ ಅಳತೆಗೋಲಾದ ಒಂದು ಪರೀಕ್ಷೆಯನ್ನು ನಡೆಸಿ ದಾಸಸಾಹಿತ್ಯ ಪ್ರಾಜೆಕ್ಟ್‌ವತಿಯಿಂದ ಪ್ರಮಾಣ ಪತ್ರಗಳನ್ನು ನೀಡಲಾಯಿತು. ಶ್ರೀ ರಾಘವೇಂದ್ರಸ್ವಾಮಿ ಮಠದ ವತಿಯಿಂದ ಮೊದಲ ಮೂರು ಸ್ಥಾನ ಪಡೆದವರನ್ನು ಸನ್ಮಾನಿಸಲಾಯಿತು.




ಬೇಸಿಗೆಯ ಶಿಬಿರದಲ್ಲಿ ಶ್ರೀ ಕೆ. ಅಪ್ಪಣ್ಣಾಚಾರ್ಯ, ಶ್ರೀ ಅನಂತಾಚಾರ್ಯ ಕಟಗೇರಿ, ಮಾತನಾಡುತ್ತ ಶ್ರೀ ಪ್ರಭಂಜನಾಚಾರ್ಯ.

ಶಿಬಿರದ ಶಿಕ್ಷಣಾರ್ಥಿ ಸಭಿಕರು.



## ಮುಳಬಾಗಿಲಿನಲ್ಲಿ ಶ್ರೀಪಾದರಾಜರ ಆರಾಧನೆ

ಮುಳಬಾಗಿಲಿನ ನೃಸಿಂಹ ತೀರ್ಥದಲ್ಲಿರುವ ಶ್ರೀಪಾದರಾಜ ಮಠದಲ್ಲಿ ಜೂನ್ 11, 12, 13, ರಂದು ಶ್ರೀಪಾದರಾಜರ ಆರಾಧನೆಯನ್ನು ಭವ್ಯವಾಗಿ ಶ್ರೀಪಾದರಾಜ ಮಠದ ಶ್ರೀ ಶ್ರೀ ವಿಜ್ಞಾನ ನಿಧಿತೀರ್ಥರ ನೇತೃತ್ವದಲ್ಲಿ ಆಚರಿಸಲಾಯಿತು. ವ್ಯಾಸರಾಜಮಠದ ಶ್ರೀ ಶ್ರೀ ವಿದ್ಯಾಪಯೋ

ನಿಧಿ ತೀರ್ಥರೂ, ರಾಘವೇಂದ್ರಸ್ವಾಮಿ ಮಠದ ಶ್ರೀ ಶ್ರೀ ಸುಜ್ಞಾನನಿಧಿ ತೀರ್ಥರೂ ಆರಾಧನೆಯಲ್ಲಿ ಭಾಗವಹಿಸಿದ್ದರು.

ಆರಾಧನೆಯ ಅಂಗವಾಗಿ ದಾಸಸಾಹಿತ್ಯ ಪ್ರಾಜೆಕ್ಟ್‌ನ ವತಿಯಿಂದ ಮೈಸೂರಿನ ಶ್ರೀ ನಾಗಸಂಪಿಗೆ, ಶ್ರೀ ರಾಮವಿಠಲಾಚಾರ್ಯ, ಶ್ರೀ ಎಂ.ವಿ. ರಾಮಾಚಾರ್, ಶ್ರೀ ಗುರು ವೆಂಕಟರಾವ್, ಶ್ರೀ ಡಿ. ರಾಮಚಂದ್ರಾಚಾರ್ ಮೊದಲಾದವರು ಉಪನ್ಯಾಸಗಳನ್ನು ನೀಡಿದರು. ಅನಂತಪುರದ ಶ್ರೀ ಸದಾನಂದ ಶಾಸ್ತ್ರಿ, ಬೆಂಗಳೂರಿನ ಶ್ರೀನಿವಾಸದಾಸರುಗಳು ಹರಿಕಥೆಯನ್ನು ಮಾಡಿದರು.

ತಿರುಪತಿಯ ಮಿಟ್ಟವೀಧಿಯ ಶ್ರೀ ಭಾರತೀ ಮಹಿಳಾಭಜನಮಂಡಳಿಯವರು ಆರಾಧನೆಯಲ್ಲಿ ಭಾಗವಹಿಸಿ ಸಾಮೂಹಿಕ ಭಜನ ಕಾರ್ಯಕ್ರಮವನ್ನು ನಡೆಸಿಕೊಟ್ಟದ್ದೇ ಅಲ್ಲದೆ ತಿರುಮಲೆಯ ಸ್ವಾಮಿಯ ಶೇಷವಸ್ತ್ರವನ್ನು ಮಠಕ್ಕೆ ಮೆರವಣಿಗೆಯಲ್ಲಿ ಹರಿದಾಸರ ಕೃತಿಗಳ ಗಾಯನದೊಡನೆ ತಂದು ಸೇರಿಸುವಲ್ಲಿ ನೆರವಾದರು. ದಾಸಸಾಹಿತ್ಯದ ವಿಶೇಷಾಧಿಕಾರಿ ಶ್ರೀ ಕೆ. ಅಪ್ಪಣ್ಣಾಚಾರ್ಯರು ತಿ.ತಿ.ದೇ. ವತಿಯಿಂದ ಶ್ರೀ ಶ್ರೀ ವಿಜ್ಞಾನ ನಿಧಿ ತೀರ್ಥರಿಗೆ ವಂದಿಸಿದರು. ಶ್ರೀ ಶ್ರೀ ಸುಜ್ಞಾನ ನಿಧಿ ತೀರ್ಥರು ಸ್ವಾಮಿಗಳನ್ನು ಪ್ರಾಜೆಕ್ಟ್ ಪರವಾಗಿ ಸನ್ಮಾನಿಸಿದರು.

ಶ್ರೀಯುತ ಚಿಂಚೋಳಿ ಪ್ರಹ್ಲಾದಾಚಾರ್ಯ, ಶ್ರೀ ಹಯವದನ ಪುರಾಣಿಕ, ಶ್ರೀ ಶೇಷಗಿರಿ ರಾಯರು, ಶ್ರೀ ಮಾಳಗಿ ರಾಮಾಚಾರ್ಯ, ಶ್ರೀ ಕರಿಗಿರಿ ಪುಷ್ಕರಾಚಾರ್ಯ, ಮೊದಲಾದವರು ದಾಸಸಾಹಿತ್ಯದ ವಿವಿಧ ಮುಖಗಳ ಬಗ್ಗೆ ಉಪನ್ಯಾಸ ನೀಡಿದರು.

## ಯಾಜ್ಞವಲ್ಕ್ಯ ಜಯಂತಿ

ಗಂಗಾವತಿಯಲ್ಲಿ ಯಾಜ್ಞವಲ್ಕ್ಯ ಸೇವಾಸಮಿತಿ ಹಾಗೂ ದಾಸಸಾಹಿತ್ಯ ಪ್ರಾಜೆಕ್ಟ್‌ಗಳ ಸಂಯುಕ್ತ ಆಶ್ರಯದಲ್ಲಿ 6-6-95 ರಿಂದ 8-6-95 ರ ವರೆಗೆ ಯಾಜ್ಞವಲ್ಕ್ಯ ಜಯಂತಿಯನ್ನು ಆಚರಿಸಲಾಯಿತು.

ಜಯಂತಿ ಉತ್ಸವದಲ್ಲಿ ಪೇಜಾವರ ಮಠದ ಶ್ರೀ ಶ್ರೀ ವಿಶ್ವೇಶತೀರ್ಥರೂ ಕಣ್ವಮಠದ ಶ್ರೀ ಶ್ರೀ ವಿದ್ಯಾಭಾಸ್ಕರ ತೀರ್ಥರೂ ಅನುಗ್ರಹ ವಚನಗಳನ್ನು 6-6-95 ರಂದು ಸಂಜೆ ನೀಡಿದರು. ಅಂದು ಶ್ರೀ ಜಯತೀರ್ಥಾಚಾರ್ಯ, ಡಾ|| ನಾರಾಯಣಾಚಾರ್ಯ ಅವರುಗಳಿಂದ ಉಪನ್ಯಾಸ ನಡೆಯಿತು.

7-6-95 ರಂದು ಬೆಳಗ್ಗೆ ಕಲ್ಯಾಣಮಂಟಪ ನಿರ್ಮಾಣ ಹಾಗೂ ಮಹಾದ್ವಾರ ನಿರ್ಮಾಣಗಳಿಗೆ ಕಣ್ವ ಮಠಾಧೀಶರ ಅಧ್ಯಕ್ಷತೆಯಲ್ಲಿ ಪೇಜಾವರ ಶ್ರೀಪಾದಂಗಳು ಶಿಲಾನ್ಯಾಸ ಮಾಡಿದರು. ಶ್ರೀ ವ್ಯಾಸನಕೆರೆ ಪ್ರಭಂಜನ ಮತ್ತು ದಾಸಸಾಹಿತ್ಯ ಪ್ರಾಜೆಕ್ಟ್‌ನ ಶ್ರೀ ಕೆ. ಅಪ್ಪಣ್ಣಾಚಾರ್ಯರು ಉಪನ್ಯಾಸ ನೀಡಿದರು. ಹುಬ್ಬಳ್ಳಿಯ ಶ್ರೀ ಶ್ರೀಪತಿ ಪಾಡೀಗಾರರ ಸಂಗೀತ ಸಭೆ ನಡೆಯಿತು.

8-6-95 ರಂದು ಧನ್ವಂತರಿ ಹೋಮದ ನಂತರ ಉಪನ್ಯಾಸಗಳಾದವು. ಅಂದು ಸಂಜೆ ಬಾಗಲಕೋಟೆಯ ಶ್ರೀ ಅನಂತ ಕುಲಕರ್ಣಿ ಬೆಂಗಳೂರಿನ ಶ್ರೀ ಹುಸೇನಸಾಬದಾಸರ ಸಂಗೀತ ಸಭೆಗಳು ನಡೆದವು.

ಗುರುರಾಜ ಭಜನಾ ಮಂಡಳಿ (ಶ್ರೀರಾಮನಗರ) ನವಲಗುಂದದ ಭಜನಾಮಂಡಳಿ, ಸಿಂಧನೂರಿನ ಶ್ರೀ ರಾಮಚಂದ್ರ ಭಜನಾಮಂಡಳಿಗಳೂ, ಕರ್ನಾಟಕದ ವಿಧಾನ ಪರಿಷದಧ್ಯಕ್ಷರೂ ಭಾಗವಹಿಸಿದ್ದರು.

# ತಿಂಗಳಿನ ಮುಖ್ಯದಿನಗಳು

## ಆಗಸ್ಟ್ --- 1995

| | | |
|---|---|---|
| 1-8-95 | ಮಂಗಳವಾರ | ಗರುಡ ಪಂಚಮಿ. |
| 2-8-95 | ಬುಧವಾರ | ಕಲ್ಕಿ ಜಯಂತಿ. |
| 4-8-95 | ಶುಕ್ರವಾರ | ವರಲಕ್ಷ್ಮಿವ್ರತ. |
| 5-8-95 | ಶನಿವಾರ | ತಿರುಮಲೆಯಲ್ಲಿ ಪವಿತ್ರೋತ್ಸವಾರಂಭ. |
| 8-8-95 | ಮಂಗಳವಾರ | ತಿರುಮಲೆಯಲ್ಲಿ ಪವಿತ್ರೋತ್ಸವ ಸಮಾಪ್ತಿ. |
| 9-8-95 | ಬುಧವಾರ | ಶ್ರೀ ಆಳ್ವಂದಾರ್ ತಿರುನಕ್ಷತ್ರ. |
| 10-8-95 | ಗುರುವಾರ | ಶ್ರೀ ವಿಖನಸ ಮಹರ್ಷಿ ಜಯಂತಿ.<br>ಶ್ರೀ ಹಯಗ್ರೀವ ಜಯಂತಿ. |
| 15-8-95 | ಮಂಗಳವಾರ | ಭಾರತ ಸ್ವಾತಂತ್ರ್ಯ ದಿನ. |
| 18-8-95 | ಶುಕ್ರವಾರ | ಶ್ರೀಕೃಷ್ಣಾಷ್ಟಮಿ, ತಿರುಮಲೆಯಲ್ಲಿ ಗೋಕುಲಾಷ್ಟಮಿ ಆಸ್ಥಾನ. |
| 28-8-95 | ಸೋಮವಾರ | ಶ್ರೀ ಬಲರಾಮ ಜಯಂತಿ, ಶ್ರೀ ವರಾಹಜಯಂತಿ. |
| 29-8-95 | ಬುಧವಾರ | ವಿನಾಯಕ ಚತುರ್ಥಿ. |






Published on behalf of T. T. Devasthanams by N. S. Ramamurthy, M.A., Editor and
Printed at T.T.D. Press by P. Mohan Rao, Manager, T.T.D. Press, Tirupati - 517 507

